# ಕುವೆಂಪು ಅವರ ಸಣ್ಣಕಥೆಗಳು

## ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ

*ಸಂಶೋಧಕ*

**ಎ.ಜಿ. ಶಾಂತೇಗೌಡ**

ಕನ್ನಡ ಎಂ.ಫಿಲ್. ಪದವಿ ವಿದ್ಯಾರ್ಥಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

*ಮಾರ್ಗದರ್ಶಕರು*

**ಡಾ. ಆರ್.ವಿ.ಎಸ್. ಸುಂದರಂ**

ವಿಶ್ರಾಂತ ಪ್ರಾಧ್ಯಾಪಕರು ಮತ್ತು ನಿರ್ದೇಶಕರು

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾನಿಲಯ

ಮಾನಸಗಂಗೋತ್ರಿ, ಮೈಸೂರು



ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೮

# ದೃಢೀಕರಣ ಪತ್ರ

೨೦೦೭-೦೮ನೇ ಸಾಲಿನಲ್ಲಿ ಕ್ರ.ಸಂ. KVTM-೦೦೧೬ರ ವಿದ್ಯಾರ್ಥಿಯಾದ ಎ.ಜಿ. **ಶಾಂತೇಗೌಡ** ಎಂ.ಫಿಲ್. ಪರೀಕ್ಷೆಯ ಅಂಗವಾಗಿ **'ಕುವೆಂಪು ಅವರ ಸಣ್ಣ ಕಥೆಗಳು'** ಎಂಬ ವಿಷಯವನ್ನು ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಇದನ್ನು ಇವರು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ = ಮೈಸೂರು
ದಿನಾಂಕ = 31-08-08

**ಡಾ. ಆರ್.ವಿ.ಎಸ್. ಸುಂದರಂ**
ವಿಶ್ರಾಂತ ಪ್ರಾಧ್ಯಾಪಕರು ಮತ್ತು ನಿರ್ದೇಶಕರು,
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,
ಮಾನಸ ಗಂಗೋತ್ರಿ, ಮೈಸೂರು - ೫೭೦ ೦೦೬

# ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿ ವಿದ್ಯಾರ್ಥಿಯಾಗಿ ಅಧ್ಯಯನ ಮಾಡುತ್ತಿರುವ ನಾನು ಎಂ.ಫಿಲ್. ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ 'ಕುವೆಂಪು ಅವರ ಸಣ್ಣಕಥೆಗಳು' ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಸಂಶೋಧನಾ ನಿಬಂಧವನ್ನು ಈ ಮೊದಲು ಭಾಗಶಃಆಗಲಿ, ಪೂರ್ಣವಾಗಿಯಾಗಲಿ ಯಾವುದೇ ಪದವಿ ಅಥವಾ ಡಿಪ್ಲೊಮಾಗಳಿಗೆ ನಾನು ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಮೈಸೂರು
ದಿನಾಂಕ : 31 - 8 - 08

ನಿಬಂಧಕಾರನ ಸಹಿ

**ಶಾಂತೇಗೌಡ ಎ.ಜಿ.**

# ಪರಿವಿಡಿ

ಕುವೆಂಪು ಅವರು ಇಪ್ಪತ್ತನೆ ಶತಮಾನದ ಕನ್ನಡ ಸಾಹಿತ್ಯದ ಶ್ರೇಷ್ಠಕವಿ. ಅವರ ಸಾಹಿತ್ಯ ಸೃಷ್ಟಿ ವೈವಿಧ್ಯಮಯವಾದುದು ಹಾಗು ಸಮೃದ್ಧವಾದುದು. ಕುವೆಂಪು ಅವರು ಕರ್ನಾಟಕದ ಆಧುನಿಕತೆಯ ಸಾಂಸ್ಕೃತಿಕ ಹರಿಕಾರರು ಮತ್ತು ದಾರ್ಶನಿಕರು. ಹಲವು ಶತಮಾನಗಳಿಗೆ ಒಮ್ಮೆ ಮಾತ್ರ ಸಂಭವಿಸಬಹುದಾದ ಪ್ರತಿಭಾ ವಿಶೇಷ ಕುವೆಂಪು ಅವರದು. ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ ಕುವೆಂಪು ಅವರ ಸಾಹಿತ್ಯ ಬೆಳವಣಿಗೆಯ ಸಾಧನೆ, ಸಿದ್ಧಿಗಳಿಂದ ಮತ್ತು ಅವರು ಇತರ ಕವಿಗಳ ಮೇಲೆ ಬೀರಿದ ಪ್ರಭಾವದಿಂದ ಕಂಗೊಳಿಸುತ್ತಿದೆ. ಯಾವ ಒಂದು ನಿರ್ದಿಷ್ಟ ತತ್ವ ಪ್ರಣಾಲಿಗಾಗಲಿ, ಮತ, ಧಾರ್ಮಿಕ ಪಂಥಗಳಿಗಾಗಲಿ ಬದ್ಧವಾಗದ ಅವರ ಅನಿಕೇತನ ಪ್ರಜ್ಞೆಯು ಮನುಷ್ಯನ ಅಸ್ತಿತ್ವದ ಅನೇಕ ಸ್ತರಗಳನ್ನು ಶೋಧನೆಗೆ ಒಳಪಡಿಸುತ್ತದೆ. ಆ ಮೂಲಕ ಅಭಿವ್ಯಕ್ತಪಡಿಸಿರುವ ಅನುಭವ ಪ್ರಪಂಚದ ಹರವು ಹಾಗು ವಿಸ್ತಾರಗಳು ಬೆರಗುಗೊಳಿಸುವಂತಿವೆ. ಜಾಗತಿಕ ಸಾಹಿತ್ಯ ಪರಂಪರೆಯ ಪ್ರಜ್ಞೆಯಿಂದ ರಚಿತವಾದ ಅವರ ಸಾಹಿತ್ಯವು ಜಗತ್ತಿನ ಶ್ರೇಷ್ಠಸಾಹಿತ್ಯಗಳ ಜತೆಗೆ ಸರಿಸಮವಾಗಿ ನಿಲ್ಲುವ ಸತ್ವವನ್ನು ಪಡೆದುಕೊಂಡಿದೆ. ಕುವೆಂಪು ಅವರ ಸಾಹಿತ್ಯವು ಇಪ್ಪತ್ತನೆಯ ಶತಮಾನದ ಸಂವೇದನೆಗಳ, ವಿಚಾರಗಳ ಹಾಗು ಆಲೋಚನೆಗಳ ಪ್ರತಿನಿಧಿಯೂ ವ್ಯಾಖ್ಯಾನವೂ ಆಗಿದೆ.

ಕುವೆಂಪು ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಸತ್ವಪೂರ್ಣವಾದ ಕೃತಿಗಳನ್ನು ರಚಿಸಿದ್ದಾರೆ. ಕಾವ್ಯ, ನಾಟಕ, ಕಾದಂಬರಿ, ಸಣ್ಣಕಥೆ, ಲಲಿತಪ್ರಬಂಧ, ಜೀವನ ಚರಿತ್ರೆ, ಆತ್ಮಕತೆ, ಕಾವ್ಯಮೀಮಾಂಸೆ, ಮಕ್ಕಳ ಸಾಹಿತ್ಯ, ಸಾಹಿತ್ಯ ವಿಮರ್ಶೆ, ವಿಚಾರ ಸಾಹಿತ್ಯ ಹೀಗೆ ಸುಮಾರು ಎಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ನಿರ್ಮಿಸಿ ಹೊಸಗನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ಕುವೆಂಪು ಸಾಹಿತ್ಯದ ಮುಖ್ಯ ಲಕ್ಷಣಗಳೆಂದರೆ ಅದಮ್ಯವಾದ ನಿಸರ್ಗ ಪ್ರೀತಿ, ಅಧ್ಯಾತ್ಮ ಮತ್ತು ವೈಚಾರಿಕತೆ ಎಂದು ಹೇಳಬಹುದು. "ಮಲೆಯನಾಡೆನೆಗೆ ತಾಯಿಮನೆ ಕಾಡು ದೇವರ ಬೀಡು" ಎಂಬ ಘೋಷಣೆಯಲ್ಲಿ ಅವರ ಗಿರಿವನ ಪ್ರೀತಿ ಕೇವಲ ಸೌಂದರ್ಯಾನುಭವದಲ್ಲಿಯೇ ಪರ್ಯವಸಾನ ವಾಗತಕ್ಕದಲ್ಲ. ಅದು ಆಧ್ಯಾತ್ಮಿಕವೂ ಹೌದು ಎನ್ನುವ ಸಂಗತಿಯನ್ನು ಸೂಚಿಸಿದ್ದಾರೆ. ನಿಸರ್ಗ ಸೌಂದರ್ಯದಲ್ಲಿಯೇ ಸೃಷ್ಟಿಯ ಚೈತನ್ಯದ ದರ್ಶನವನ್ನು ಪಡೆಯುತ್ತಾರೆ.

ಭಾರತೀಯ ಸಾಂಸ್ಕೃತಿಕ ಸಂದರ್ಭದಲ್ಲಿ ಕುವೆಂಪು ಅವರ ಕೃತಿಗಳಿಂದ ಮೂಡಿರುವ ವೈಚಾರಿಕ ಸಂಗತಿ ಮಹತ್ವಪೂರ್ಣವಾಗಿದೆ. ಪುರೋಹಿತಶಾಹಿ ನಿರ್ಮಿತಿಗಳಾದ ಮತಾಂಧತೆ ಜಾತೀಯತೆ ಹಾಗು ಧಾರ್ಮಿಕ ಮೌಢ್ಯಗಳನ್ನು ಬಿರುಸಾದ ಮಾತಿನಲ್ಲಿ ಖಂಡಿಸಿದ್ದಾರೆ. ಭಾರತೀಯ ಸಮಾಜದಲ್ಲಿ ಸೃಷ್ಟಿಯಾಗಿದ್ದ ನಿಷ್ಕ್ರಿಯತೆಯನ್ನು ಹಾಗೂ ಅದಕ್ಕೆ ಕಾರಣಗಳನ್ನು ಶೋಧಿಸುವುದು ಕುವೆಂಪು ಅವರ ಸೃಜನಶೀಲತೆಯ ವೈಶಿಷ್ಟ್ಯವಾಗಿದೆ. ಕುವೆಂಪು ಅವರ ಸಂವೇದನೆ ಸಾಂಪ್ರದಾಯಿಕ ವೈದಿಕ ಸಂಸ್ಕೃತಿ ಹಾಗು ವಸಾಹತುಶಾಹಿ ಸಂಸ್ಕೃತಿಗಳಿಗೆ ಏಕಕಾಲದಲ್ಲಿ ಮುಖಾಮುಖಿಯಾದುದು ಕನ್ನಡ ಸಾಹಿತ್ಯದಲ್ಲಿಯೇ ಹೆಚ್ಚು ಗಂಭೀರವಾದದ್ದಾಗಿದೆ. ಅಲ್ಲದೆ ಮಾನವೀಯ ಮೌಲ್ಯಗಳ ಶೋಧನೆಯ ನೆಲೆಯನ್ನು ಅವರ

ಸಾಹಿತ್ಯ ಒಳಗೊಂಡಿದೆ. ಕುವೆಂಪು ಅವರ ಬದುಕು, ಬರಹ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾಳಜಿ ಇವುಗಳೆಲ್ಲ ಮಹತ್ವಪೂರ್ಣವಾದುವುಗಳಾಗಿವೆ. ಈ ಎಲ್ಲ ದೃಷ್ಟಿಯಿಂದ ಕುವೆಂಪು ಅವರ ಸಾಹಿತ್ಯದ ಅಧ್ಯಯನ ಮಾಡುವುದರಿಂದ ಹೊಸ ಚಿಂತನೆಯನ್ನು ಬೆಳಸಿಕೊಳ್ಳ ಬಹುದಾಗಿದೆ. ಅವರ ಸಾಹಿತ್ಯದಲ್ಲಿ ಸಾಮಾಜಿಕ ಅಸಮಾನತೆಗೆ ಒಳಗಾದ ಜನತೆಯ ಪರವಾದ ಧೋರಣೆಗಳನ್ನು ಕಾಣುತ್ತೇವೆ. ಈ ಹಿನ್ನೆಲೆಯಿಂದಾಗಿ ಕುವೆಂಪು ಅವರ ಸಣ್ಣಕಥೆಗಳನ್ನು ಕುರಿತು ಅಧ್ಯಯನ ಮಾಡಲು ಉದ್ದೇಶಿಸಲಾಗಿದೆ.

ಸಣ್ಣಕಥೆ ಅದರ ಹೆಸರೇ ತಿಳಿಸುವಂತೆ ಗಾತ್ರದಲ್ಲಿ ಚಿಕ್ಕದು. ಆದರೆ ಪ್ರಭಾವದಲ್ಲಿ ಮಹತ್ತರವಾದದ್ದಾಗಿದೆ. ಕಥೆಗಳನ್ನು ಕೇಳುವುದೆಂದರೆ ಮಕ್ಕಳು ಮೊದಲುಗೊಂಡು ಎಲ್ಲ ವಯಸ್ಸಿನವರಿಗೂ ಪ್ರೀತಿ ಮತ್ತು ಆಸಕ್ತಿ ಇರುತ್ತದೆ. ಇದು ಓದುಗರಿಗೆ ಅತ್ಯಂತ ಪ್ರಿಯವಾದ ಪ್ರಕಾರ. ಸಣ್ಣಕಥೆ, ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಒಂದು ವಿಶಿಷ್ಟ ನೆಲೆ, ಬೆಲೆಯನ್ನು ಹೊಂದಿದೆ. ಸಣ್ಣಕಥೆ ವಿಷಯವನ್ನು ನೇರವಾಗಿ, ಸರಳವಾಗಿ ತಿಳಿಸುತ್ತದೆ. ಇದರಲ್ಲಿ ಬರುವ ಪಾತ್ರಗಳ ಸಂಖ್ಯೆ ಬೆರಳೆಣಿಕೆಯಷ್ಟು ಮಿತಿಯುಳ್ಳದ್ದಾಗಿರುತ್ತದೆ. ಇದರ ಬಂಧ ತುಂಬ ಚಿಕ್ಕದಾದರೂ ಔಚಿತ್ಯ ಬಹಳ ಪರಿಣಾಮಕಾರಿಯಾದದ್ದಾಗಿದೆ. ಇದರಲ್ಲಿ ಒಬ್ಬ ವ್ಯಕ್ತಿ, ವಸ್ತು, ಘಟನೆ, ಯಾವುದಾದರು ಒಂದನ್ನು ಇಟ್ಟುಕೊಂಡು ಅದರ ಮೇಲೆ ಕಥೆಯ ರಚನೆಯಾಗಿರುತ್ತದೆ. ಕಥೆಗಳು ಒಂದಕ್ಕಿಂತ ಒಂದು ಭಿನ್ನವಾಗಿರುತ್ತವೆ. ಒಂದೊಂದು ಒಂದು ರೀತಿಯಾದ ನೀತಿಯನ್ನು ಹೇಳುವಂತಾಗಿರುತ್ತದೆ. ಈ ಎಲ್ಲ ಕಾರಣಗಳಿಂದ ಸಣ್ಣಕಥೆಯು ಓದುಗರಿಗೆ ಅತ್ಯಂತ ಪ್ರಿಯವಾದ ಪ್ರಕಾರವಾಗಿದೆ.

ಪ್ರಕೃತ ನಿಬಂಧ ಆರು ಅಧ್ಯಾಯಗಳನ್ನು ಒಳಗೊಂಡಿದೆ. ಕುವೆಂಪು ಅವರ ಸಣ್ಣಕಥೆಗಳನ್ನು ಕುರಿತು ಬರೆಯುವ ಸಂದರ್ಭದಲ್ಲಿಯೆ ಅವರ ಸಾಹಿತ್ಯದರ್ಶನ, ನವೋದಯಕಾಲದ ಸಣ್ಣಕಥೆಗಳು, ಆಧುನಿಕ ಕನ್ನಡ ಸಣ್ಣಕಥೆಗಳಿಗೆ ಕುವೆಂಪು ಅವರ ಕೊಡುಗೆ ಈ ಎಲ್ಲ ಸಂಗತಿಗಳನ್ನು ಹೇಳುವುದು ಈ ನಿಬಂಧದ ಉದ್ದೇಶವಾಗಿದೆ.

ಕುವಂಪು ಅವರ ದೃಷ್ಟಿ ಮಹತ್ತಿನತ್ತ ಹಾಗು ಬೃಹತ್ತಿನತ್ತಲೇ ಮೊದಲಿನಿಂದಲೂ ಕೇಂದ್ರೀಕೃತವಾಗಿದೆ. ಮಹಾಕಾವ್ಯ, ಬೃಹತ್ತಾದ ಕಾದಂಬರಿಗಳು ಹಾಗು ವಿಪುಲವಾದ ಭಾವಗೀತೆಗಳನ್ನು ರಚಿಸಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯು ಸತ್ವಪೂರ್ಣವಾದ ಮತ್ತು ಮೌಲ್ಯಯುತವಾದ ಕೃತಿಗಳನ್ನು ರಚಿಸಿದ್ದಾರೆ. ಕುವೆಂಪು ಅವರು ಸಣ್ಣಕಥೆಗಳನ್ನು ಬರೆದದ್ದು ತುಂಬಾ ಕಡಿಮೆ. ಸಣ್ಣಕಥೆ ಕುವೆಂಪು ಅವರ ಪ್ರತಿಭೆಯ ಅವಜ್ಞೆಗೆ ಒಳಗಾಗಿದ್ದರು ಹಲವು ಉತ್ತಮ ಕಥೆಗಳನ್ನು ರಚಿಸಿದ್ದಾರೆ. ಸಂಖ್ಯೆಯ ದೃಷ್ಟಿಯಿಂದ ಕಡಿಮೆ ಎನಿಸಿದರು ಮಹತ್ತರವಾದ ಕತೆಗಳಾಗಿವೆ. ಕುವೆಂಪು ಅವರ ಸಣ್ಣಕಥೆಗಳು ವಸ್ತುವೈವಿಧ್ಯ, ಶೈಲಿ, ನಿರೂಪಣೆಗಳ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ. ಅವರ ಎರಡು ಕಥಾಸಂಕಲನಗಳು ಪ್ರಕಟವಾಗಿವೆ. ಮೊದಲನೆಯದು 1936ರಲ್ಲಿ ಪ್ರಕಟವಾದ 'ಸಂನ್ಯಾಸಿ ಮತ್ತು ಇತರ ಕಥೆಗಳು' ಈ ಕಥಾ ಸಂಕಲನದಲ್ಲಿ ಒಂಬತ್ತು ಕಥೆಗಳಿವೆ. 1940ರಲ್ಲಿ ಪ್ರಕಟವಾದ 'ನನ್ನ ದೇವರು ಮತ್ತು ಇತರ ಕಥೆಗಳು'. ಇದರಲ್ಲಿ ಎಂಟು ಕಥೆಗಳಿವೆ. ಈ ಎಲ್ಲ

ಕಥೆಗಳ ಮೂಲಕ ಕುವೆಂಪು ಅವರು ಅದಮ್ಯಜೀವನ ಪ್ರೀತಿಯನ್ನು ಉಲ್ಲಾಸವನ್ನು ತೋರಿಸಿದ್ದಾರೆ. ನಾವು ಬದುಕುತ್ತಿರುವ ಸಮಾಜದ ಅಂತರ್‌ದರ್ಶನ ಮಾಡಿಸಿದ್ದಾರೆ. ನವೋದಯ ಕಾಲದ ಶ್ರೇಷ್ಠ ಕವಿಯಾದ ಕುವೆಂಪು ಆ ಕಾಲಘಟ್ಟದ ವಾಸ್ತವಿಕ ಬದುಕನ್ನು ಸಣ್ಣಕಥೆಗಳ ಮೂಲಕ ನಿರೂಪಿಸಿದ್ದಾರೆ.

ಹೀಗಾಗಿ ಕುವೆಂಪು ಅವರ ಕಥೆಗಳು ಇಂದಿಗೂ ನಮ್ಮ ಸಮಾಜಕ್ಕೆ ಮುಖ್ಯವಾದ ಕೊಡುಗೆಗಳಾಗಿವೆ. ಈ ಎಲ್ಲ ದೃಷ್ಟಿಯಿಂದ ಸಣ್ಣಕಥೆಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ಕುವೆಂಪು ಅವರ ಕೊಡುಗೆ ಯಾವ ರೀತಿ ಬಂದಿದೆ ಎಂಬುದನ್ನು ವಿವರಿಸುವುದೇ ಈ ನಿಬಂಧದ ಮುಖ್ಯ ಉದ್ದೇಶ.

ಕುವೆಂಪು ಇಪ್ಪತ್ತನೆ ಶತಮಾನದ ಕನ್ನಡ ಸಾಹಿತ್ಯದ ಶ್ರೇಷ್ಠ ಕವಿ. ಮಾನವೀಯ ಮೌಲ್ಯಗಳ ಶೋಧನೆಗೆ ತೊಡಗಿದ ಅವರ ಸಂವೇದನೆಯು ವಿಶಿಷ್ಟವಾಗಿದೆ. ಮನುಷ್ಯ ಬದುಕನ್ನು ಶೋಷಿಸುವ ವರ್ಣವ್ಯವಸ್ಥೆ, ಜಾತಿಪದ್ಧತಿ, ಮೌಢ್ಯತೆ, ಪುರೋಹಿತಶಾಹಿ ಪ್ರವೃತ್ತಿ, ಅವೈಚಾರಿಕತೆ, ಸಾಮಾಜಿಕ ಅಸಮಾನತೆ ಇವುಗಳನ್ನು ಉಗ್ರವಾದ ಚಿಕಿತ್ಸೆಗೆ ಗುರಿಪಡಿಸುವ ನಿಲುವನ್ನು ಕುವೆಂಪು ಅವರ ಕೃತಿಗಳಲ್ಲಿ ಹಾಗು ವೈಚಾರಿಕ ಲೇಖನಗಳಲ್ಲಿ ಗುರುತಿಸಬಹುದಾಗಿದೆ.

ಸಾಹಿತ್ಯದರ್ಶನ ಮತ್ತು ಸ್ವರೂಪವನ್ನು ಕುರಿತು ಕುವೆಂಪು ಅವರೇ ತಿಳಿಸುವಂತೆ "ಸಮನ್ವಯ, ಸರ್ವೋದಯ ಮತ್ತು ಪೂರ್ಣದೃಷ್ಟಿ ಈ ಮೂರು ಮಹಾತತ್ತ್ವಗಳು ಜಗತ್ತಿನ ಮುಂದಿನ ಬಾಳಿನ ಮೂಲಮಂತ್ರಗಳಾಗುವುದರಲ್ಲಿ ಸಂದೇಹವಿಲ್ಲ. ಆ ಬಾಳನ್ನು ನಿರೂಪಿಸುವುದರಲ್ಲಿಯೂ, ಸ್ಥಾಪಿಸುವುದರಲ್ಲಿಯೂ ಆಸಕ್ತವಾಗಿ ಮುಂದಿನ ಸಾಹಿತ್ಯಕ್ಕೂ ಆ ಮೂಲಮಂತ್ರ ತ್ರಯಗಳೆ ದರ್ಶನವಾಗಿ ಮಾರ್ಗದರ್ಶಕವಾಗುತ್ತವೆ"[1] ಮನುಜ ಮತ, ವಿಶ್ವಪಥ, ಸರ್ವೋದಯ, ಸಮನ್ವಯ ಮತ್ತು ಪೂರ್ಣದೃಷ್ಟಿಗಳ ಕುವೆಂಪು ಅವರ ಸಾಹಿತ್ಯದರ್ಶನದ ಮೂಲ ಅಂಶಗಳು. ಎಲ್ಲ ಕಾಲಕ್ಕು ಅನ್ವಯವಾಗುವ ಈ ತತ್ವಗಳ ದರ್ಶನವನ್ನು ವಿಶ್ವಮಾನವ ಗೀತೆ ಸಾರುತ್ತದೆ. ಅವರ ಸಾಹಿತ್ಯದರ್ಶನ ಮಾನವೀಯ ಮೌಲ್ಯಗಳ ಶೋಧನೆ, ದೇಶಭಕ್ತಿ ಮತ್ತು ಸಾಮಾಜಿಕ ಪ್ರಜ್ಞೆಯನ್ನು ಒಳಗೊಂಡಿದೆ.

ಪೂರ್ಣಚಂದ್ರತೇಜಸ್ವಿಯವರು "ಕುವೆಂಪು ನಮ್ಮ ಕಾಲದ ಅತಿ ಸಂಕೀರ್ಣ ವ್ಯಕ್ತಿತ್ವದ ಪ್ರತಿಭೆ. ಭಾರತೀಯ ಸನಾತನ ಧರ್ಮದ ಅತ್ಯಂತ ಕಟು ವಿಮರ್ಶೆ ಕುವೆಂಪು ಅವರಲ್ಲಿ ಕಾಣಬಹುದು. ಅಂತೆಯೇ ಉಪನಿಷದ್ ದರ್ಶನಗಳ ಆರಾಧನೆಯನ್ನು ಅವರಲ್ಲಿ ಕಾಣಬಹುದು. ಅವರು ಜೀವನಾದ್ಯಂತ ಎಂದೂ ಯಾವ ದೇವಸ್ಥಾನಕ್ಕು ಕಾಲಿಡಲಿಲ್ಲ. ಆದರೆ ಅಷ್ಟೇ ಗಾಢವಾಗಿ ಧ್ಯಾನ, ತಪಸ್ಯೆ, ಪ್ರಾರ್ಥನೆಗಳನ್ನು ಪ್ರತಿವಾದಿಸಿದರು"[2] ಎಂದು ಹೇಳಿದ್ದಾರೆ. ತೇಜಸ್ವಿಯವರ ಹೇಳಿಕೆ ಸಮರ್ಥನೀಯವಾಗಿದೆ. ಕುವೆಂಪು ಅವರಿಗೆ ಶುಷ್ಕವಾದ ಆಚಾರ ಸಂಪ್ರದಾಯಗಳಲ್ಲಿ ನಂಬಿಕೆಯಿರಲಿಲ್ಲ. ಯಾಂತ್ರಿಕ ಪೂಜೆಯನ್ನು ನಿರಾಕರಿಸುತ್ತಾರೆ. ಅಲ್ಲದೆ ಕಂದಾಚಾರ, ಬೂಟಾಟಿಕೆ, ಆತ್ಮವಂಚನೆ ಇವುಗಳನ್ನು ನಿಷ್ಠುರವಾಗಿ ಖಂಡಿಸುತ್ತಿದ್ದರು. ಕುವೆಂಪು ಅವರ ಶೂದ್ರತಪಸ್ವಿ ನಾಟಕದಲ್ಲಿ ಶಂಬೂಕ ತಪಸ್ಸು ಮಾಡಿದ್ದರಿಂದಲೆ ತನ್ನ ಮಗ ಸತ್ತುಹೋದನೆಂದು ಬ್ರಾಹ್ಮಣ ರಾಮನಲ್ಲಿ ದೂರುತ್ತಾನೆ. ಆದರೆ ರಾಮ ಅವನಿಗೆ ವಿವೇಕ ಹೇಳುತ್ತಾನೆ. ತಪಸ್ಸು ಬಹಳ ದೊಡ್ಡದು. ಯೋಗ್ಯವಾದದ್ದು ಎಂಬುದಾಗಿ ತಿಳಿಸುತ್ತಾನೆ. ಕುವೆಂಪು ಅವರ ದೃಷ್ಟಿಯಲ್ಲಿ ತಪಸ್ಸು ದೊಡ್ಡದು, ಯಾರು ಮಾಡಿದರೂ ಅದು ಶ್ರೇಷ್ಠವಾದುದಾಗಿದೆ ಎಂಬ ದರ್ಶನ ವ್ಯಕ್ತವಾಗಿದೆ.

ದಾರ್ಶನಿಕ ಎಂಬ ಮಾತಿಗೆ ಸಿಪಿಕೆಯವರು "ಋಷಿ, ದ್ರಷ್ಟಾರ, ಕಾಣುವವನು Seer ಎಂಬ ಅರ್ಥದಲ್ಲಿ ತೆಗೆದುಕೊಳ್ಳಲಾಗಿದೆ. ದರ್ಶನ (Vision) ದಿಂದ ದಾರ್ಶನಿಕ. ದರ್ಶನ ಎಂದರೆ ಕಾಣುವುದು, ಎಲ್ಲವನ್ನು ಕಾಣುವುದು..... ನಾನೃಷಿಃ ಕವಿರಿತ್ಯುಕ್ತಂ ಋಷಿಶ್ಚಕಿಲ ದರ್ಶನಾತ್" (ಋಷಿಯಲ್ಲದವನು ಕವಿಯಲ್ಲಿ ಎನ್ನುತ್ತಾರೆ, ದರ್ಶನದಿಂದ ಋಷಿ). ಆದ್ದರಿಂದ, ಕವಿ ಎನಿಸಿಕೊಳ್ಳತಕ್ಕ ವ್ಯಕ್ತಿಯಲ್ಲಿ ಅಷ್ಟೋ ಇಷ್ಟೋ ಋಷಿತ್ವ ಇರಲೇಬೇಕು, ಇರುತ್ತದೆ. ಅದನ್ನು ವರಿಷ್ಠ ಪ್ರಮಾಣದಲ್ಲಿ ಉಳ್ಳಾತ ಮಹಾಕವಿಯಾಗುತ್ತಾನೆ. ಕುವೆಂಪು ಅಂಥ ಮಹಾಕವಿ"[3] ಎಂಬುದಾಗಿ ತಿಳಿಸಿದ್ದಾರೆ. ಅವರ ಹೇಳಿಕೆಯಲ್ಲಿ ಕವಿಯಾದವನು ಪರಿಶುದ್ಧವಾದ

ಬದುಕನ್ನು ನಡೆಸಿರಬೇಕು ಎಂಬ ಅಭಿಪ್ರಾಯವಿರಬಹುದೆಂದು ಭಾವಿಸಬಹುದಾಗಿದೆ. ಕುವೆಂಪು ಅವರ ಬದುಕು ಬರಹ ಒಂದೇ ಆಗಿದೆ. ಹಾಗಾಗಿ ಅವರ ಸಾಹಿತ್ಯದಲ್ಲಿ ವೈಚಾರಿಕತೆ, ವೈಜ್ಞಾನಿಕತೆ ಹಾಗು ಮಾನವೀಯ ದರ್ಶನವನ್ನು ಕಾಣಬಹುದಾಗಿದೆ.

ಕುವೆಂಪು ಅವರು 'ಶ್ರೀರಾಮಾಯಣದರ್ಶನಂ' ಮಹಾಕಾವ್ಯಕ್ಕೆ ವಾಲ್ಮೀಕಿ ರಾಮಾಯಣದ ಕಥೆಯನ್ನು ವಸ್ತುವಾಗಿ ತೆಗೆದುಕೊಂಡಿದ್ದರು ಸಹ ಇಂದಿನ ಯುಗದ ಕಾಣ್ಕೆಯನ್ನು ನೀಡಿದ್ದಾರೆ. ಅವರ ಶ್ರೀರಾಮಾಯಣ ದರ್ಶನದ ವಿಶೇಷ ಅಂಶಗಳನ್ನು ಡಾ. ಪ್ರಭುಶಂಕರ ಅವರು ಹೀಗೆ ತಿಳಿಸಿದ್ದಾರೆ. "ಒಂದು ವಿರಾಟ್ ಮನಸ್ಸು ವಿಶ್ವವ್ಯಾಪಿಯ ಸರ್ವಶಕ್ತವೂ ಆದ ಮನಸ್ಸು ಜಗತ್ತನ್ನು ಹಾಸುಹೊಕ್ಕಾಗಿ ನೇಯ್ದು ಆಳುತ್ತಿದೆ. ಅದು ಎಲ್ಲ ಜೀವಿಗಳನ್ನು ಸೂಕ್ಷ್ಮಾತಿ ಸೂಕ್ಷ್ಮವಾದ ಸೂತ್ರದಿಂದ ಬಂಧಿಸಿದೆ. ಜೀವಿಗಳು ಸ್ವತಂತ್ರರಲ್ಲ. ಆದರೂ ಸ್ವತಂತ್ರರು ಎಂಬ ಭಾವನೆಯನ್ನು ಆ ವಿರಾಟ್ ಮನಸ್ಸೂ ಅವರಿಗೆ ನೀಡಿದೆ. ರಾಮ, ಸೀತೆ, ರಾವಣ, ಮಂಡೋದರಿ, ಮಂಥರೆ ಯಾರೇ ಆದರೂ ಆ ವಿಧಿಯ ಹಸ್ತದಲ್ಲಿ ಸೂತ್ರದ ಗೊಂಬೆಗಳು. ಪ್ರತಿಯೊಂದು ಜೀವಿಗೂ ಉದ್ಧಾರವಿದ್ದೇ ಇದೆ. ಎಲ್ಲ ಪಾತ್ರಗಳು ಅಂತಿಮವಾಗಿ ಆತ್ಮ ಸಾಕ್ಷಾತ್ಕಾರದ ಕಡೆಗೆ ಯಾತ್ರೆ ಹೊರಟಿದ್ದಾರೆ. ಹೀಗೆ ಸರ್ವವನ್ನು ಸಮದರ್ಶನದಲ್ಲಿ ಪರಿಭಾವಿಸುವ ಅದ್ವೈತ ದೃಷ್ಟಿ ಕುವೆಂಪು ಅವರದಾಗಿದೆ"[೪] ಕುವೆಂಪು ಅವರ ಮಹಾಕಾವ್ಯವನ್ನು ಕುರಿತು ಹೇಳಿರುವ ಅಭಿಪ್ರಾಯ ಅತ್ಯಂತ ಸಮರ್ಥನೀಯವಾಗಿದೆ.

ವಾಲ್ಮೀಕಿ ರಾಮಾಯಣದಲ್ಲಿ ಎಲ್ಲರ ತಿರಸ್ಕಾರಕ್ಕೆ, ಅವಮಾನಕ್ಕೆ ಗುರಿಯಾಗಿದ್ದ ಮಂಥರೆ. ಕುವೆಂಪು ಅವರ ಶ್ರೀರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಮಮತೆಯ ಸುಳಿ ಮಂಥರೆಯಾಗಿದ್ದಾಳೆ. ಕೆಟ್ಟವಳು, ಕಳಂಕಿತಳು ಎಂಬ ಅವಮಾನಕ್ಕೆ ನೋವಿಗೆ ಒಳಗಾದ ಮಂಥರೆ ಕುವೆಂಪು ಅವರ ಕಾವ್ಯದಲ್ಲಿ ಕರುಣೆಗೆ ಪಾತ್ರಳಾಗುತ್ತಾಳೆ. ಶ್ರೀ ರಾಮನನ್ನು ಕಾಡಿಗೆ ಕಳಿಸಲು ಕಾರಣಳಾದ ಮಂಥರೆ ಶ್ರೀರಾಮಾಗಮನಕ್ಕು ಪ್ರೇರಕವಾದ ಶಕ್ತಿಗಳಲ್ಲಿ ಒಬ್ಬಳಾಗುತ್ತಾಳೆ.

ರಾಮನನ್ನು ಹುಡುಕಿಕೊಂಡು ಕಾಡಿಗೆ ಹೋದಾಗ ಎದುರಿಗೆ ಕಂಡ ಬೆಳಕೆ ಶ್ರೀರಾಮ ಎಂದು ತಬ್ಬಿ ಮುಂದುವರಿದಾಗ ಆ ಬೆಂಕಿಯಲ್ಲಿ ಚಿಟ್ಟೆ ಸೀದಂತೆ ಸುಟ್ಟು ಬೂದಿಯಾಗುತ್ತಾಳೆ. ಅದೇ ಅವಳ ಸಾರ್ಥಕತೆಯಾಗುತ್ತದೆ. ವಿಧಿ ಮಂಥರೆಯನ್ನು ಬಳಸಿಕೊಂಡು ಮಹಾತ್ಕಾರ್ಯ ಮಾಡಬಲ್ಲದು, ಆದರೆ ಸಾಮಾನ್ಯ ಲೋಕದ ಕಣ್ಣು ಅದನ್ನು ಕುರುಡಾಗಿ ಕಾಣುತ್ತಿದೆ ಎಂಬ ಸತ್ಯವನ್ನು ಕುವೆಂಪು ಮಂಥರೆಯ ಪಾತ್ರದಲ್ಲಿ ಈ ಮೂಲಕ ನಿರೂಪಿಸಿದ್ದಾರೆ.

ಕಾಮುಕತೆ ಮತ್ತು ಅಹಂಕಾರದಿಂದ ಮೆರೆಯುತ್ತಿದ್ದ ರಾವಣನ ಮನಸ್ಸು ಪರಿವರ್ತನೆಯಾದ ಬಗೆಯನ್ನು 'ದಶಾನನ ಸ್ವಪ್ನಸಿದ್ಧಿ' ಎಂಬ ಭಾಗದಲ್ಲಿ ಕಾಣುತ್ತೇವೆ. ಸೀತೆಯ ಶೀಲಗುಣ ಪತಿಯ ಮೇಲಿದ್ದ ಪ್ರೀತಿ, ಪೂಜ್ಯತೆ ಕಾಮಾಂಧನಾಗಿದ್ದ ರಾವಣನ ಮನಸ್ಸು ಪರಿವರ್ತನೆಯಾಗುವಂತೆ ಮಾಡುತ್ತದೆ. ಅವನ ಕಾಮ ಅವಳ ಬಗೆಗಿನ ಪೂಜ್ಯತೆಯಾಗುತ್ತವೆ. ತನ್ನನ್ನು ಗೆದ್ದ ಸೀತೆಗೆ ಆಕೆಯ ಪತಿ ರಾಮನನ್ನೆ ಗೆದ್ದು ಕಾಣಿಕೆಯಾಗಿ ಒಪ್ಪಿಸುವ ನಿರ್ಧಾರ ಮಾಡುತ್ತಾನೆ. ಕೆಡುಕಿನಿಂದ ಒಳಿತಿಗೆ

ಪರಿವರ್ತನೆಯಾಗುವ, ಮಹಾನ್ ಸಾಧಕನಾಗಿ ಕಾಣುವ ರಾವಣನ ಪಾತ್ರ 'ದಶಾನನ ಸ್ವಪ್ನ ಸಿದ್ಧಿ'ಯಲ್ಲಿ ಅದ್ಭುತವಾಗಿ ಮೂಡಿಬಂದಿದೆ. ಈ ಎಲ್ಲ ಹೊಸ ಆಲೋಚನೆಗಳು ಕುವೆಂಪು ಅವರ ದರ್ಶನದ ಕೊಡುಗೆಗಳಾಗಿವೆ.

ಆರ್ಬಿಯಸ್ ಸುಂದರಂ ಅವರು 'ಶ್ರೀ ರಾಮಾಯಣ ದರ್ಶನದ' ರಾವಣನ ಪಾತ್ರದ ಬಗ್ಗೆ ತಮ್ಮ ಅಭಿಪ್ರಾಯ ಸೂಚಿಸುತ್ತ "ಶ್ರೀ ರಾಮಾಯಣದರ್ಶನದ ಹೃದಯ ರಾವಣನ ಪಾತ್ರವೆಂದು ಹೇಳುವರು. ರಾಮ-ರಾವಣರಿಬ್ಬರೂ ಒಂದೇ ಶಕ್ತಿಯ ಎರಡು ರೂಪಗಳಂತೆ ಕುವೆಪು ಅವರು ಸೃಷ್ಟಿಸಿದ್ದಾರೆ..... 'ಮೂಲ ರಾಮಾಯಣ'ದ ರಾವಣ ಕೇವಲ ದುಷ್ಟ, ವಿಷಯ ಲಂಪಟ, ಲೋಕಕಂಟಕ, ಸಾಯುವವರೆಗೂ ಅವನು ಹಾಗೆಯೇ ಉಳಿದುಕೊಳ್ಳುತ್ತಾನೆ, ಎಂಬುದು ಬಹಳಮಟ್ಟಿಗೆ ನಿಜ. ಅದೇನಿದ್ದರೂ ಕುವೆಂಪು ಅವರು ರಾವಣನ ಮನಸ್ಸಿನಲ್ಲಿ ಕ್ರಮ ವಿಕಾಸವನ್ನು ಚಿತ್ರಿಸಿದ್ದಾರೆಂಬುದೇನೋ ನಿಜ. ಯಾವುದೂ ಕ್ಷುದ್ರವಲ್ಲ ಎಂಬ ಪೂರ್ಣದೃಷ್ಟಿಗೆ ಉದಾಹರಣಪ್ರಾಯವಾಗಿ ರಾವಣನ ಪಾತ್ರ 'ರಾಮಾಯಣದರ್ಶನಂ' ಕಾವ್ಯದಲ್ಲಿ ಸೃಷ್ಟಿಗೊಂಡಿದೆ. ಮಂಥರೆ, ಊರ್ಮಿಳೆ, ಶಬರಿ ಮುಂತಾದ ಚಿಕ್ಕ ಪಾತ್ರಗಳನ್ನು ಅತ್ಯಂತ ಸುಂದರವಾಗಿ ರೂಪಿಸಿದ್ದಾರೆ. ಕುವೆಂಪು ಅವರು"[9] ಈ ಅಭಿಪ್ರಾಯದಂತೆ ಇಲ್ಲಿಯ ಎಲ್ಲ ಪಾತ್ರಗಳು ಅಂತಿಮವಾಗಿ ಪೂರ್ಣತೆಯ ಕಡೆಗೆ ಸಾಗುತ್ತವೆ.

ಕುವೆಂಪು ಅವರ 'ಶ್ರೀರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಚಿಂತನಶೀಲತೆಯ ಜೊತೆಗೆ ಸಾಮಾಜಿಕ, ಸಾಂಸ್ಕೃತಿಕ, ಸಂಘರ್ಷಗಳನ್ನು ವೈರುಧ್ಯಗಳನ್ನು ತುಂಬಾ ಗಂಭೀರವಾಗಿ ಚಿತ್ರಿಸಲಾಗಿರುವುದನ್ನು ಕಾಣಬಹುದಾಗಿದೆ. ಸಂಸ್ಕೃತಿ ವಿಕಾಸದ ವಿವಿಧ ಹಂತಗಳನ್ನು ಪ್ರತಿನಿಧಿಸುವ ವಾನರರು, ರಾವಣಾದಿಗಳು ಮತ್ತು ಶ್ರೀರಾಮಾದಿಗಳನ್ನು ಒಳಗೊಂಡ ರಾಮಾಯಣದ ವಸ್ತುವನ್ನು ಕುವೆಂಪು ಅವರು ಕಂಡುಕೊಂಡ ಕ್ರಮ ಮತ್ತು ಅಭಿವ್ಯಕ್ತಿಸಿದ ರೀತಿಗಳನ್ನು ಗಮನಿಸಿದಾಗ ಸಾಮಾಜಿಕ ಅಸಮಾನತೆಯನ್ನು ವಿರೋಧಿಸುತ್ತಲೇ ಸಾಂಸ್ಕೃತಿಕ ಸಮತೋಲನಕ್ಕಾಗಿ ಆಶಿಸುವ ಧ್ವನಿ ಮನವರಿಕೆಯಾಗುತ್ತದೆ. 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಕೆಲವು ಮುಖ್ಯ ಸನ್ನಿವೇಶಗಳಲ್ಲಿ ಹೊರಬರುವ ಮಾತುಗಳು ಕವಿಯ ಆಶಯಕ್ಕೆ ಅನುಗುಣವಾಗಿರುವುದು ಕಂಡು ಬರುತ್ತದೆ.

ಒಂದು ಕಡೆ ಲಕ್ಷ್ಮಣನು ವಾನರರನ್ನು ಕೀಳಾಗಿ ಪರಿಗಣಿಸಿದಾಗ ಕುವೆಂಪು ಅವರ ರಾಮ 'ವಾನರರು ನೀನು ತಿಳಿದಿರುವಂತೆ ಕೀಳಾದವರಲ್ಲ ನಮ್ಮದು ನೀನು ಊಹಿಸಿರುವಂತೆ ಶ್ರೇಷ್ಠತೆಯಿಂದ ಕೂಡಿಲ್ಲ' ಎಂಬುದಾಗಿ ಬುದ್ಧಿ ಹೇಳುತ್ತಾನೆ. ಇದು ಆರ್ಯ ಸಂಸ್ಕೃತಿಯ ಭ್ರಮೆಗೆ ಹೇಳಿದ ಬುದ್ಧಿಮತಿಯಂತಿದೆ. ಹೀಗೆ ಶೂದ್ರ, ದ್ರಾವಿಡ ಸಂಸ್ಕೃತಿಯನ್ನು ಘನತೆಯಿಂದ ಕಾಣುವ ಸಂದರ್ಭ ಕುವೆಂಪು ಅವರ ದಾರ್ಶನಿಕ ದೃಷ್ಟಿಗೆ ನಿದರ್ಶನವಾಗಿದೆ. 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ರಾಮ ರಾವಣರ ಕಥೆಯನ್ನು ಹೇಳುತ್ತಿದ್ದರೂ ಪರೋಕ್ಷವಾಗಿ ಆರ್ಯ ದ್ರಾವಿಡ ಸಂಸ್ಕೃತಿಯ ಸಂಘರ್ಷವನ್ನು ಒಳಗೊಂಡಿರುವುದನ್ನು ಕಾಣಬಹುದಾಗಿದೆ. ಕುವೆಂಪು ಅವರ ಪೂರ್ಣದೃಷ್ಟಿಯಲ್ಲಿ ಎಲ್ಲವು ಮಹತ್ತರವಾದುದಾಗಿದೆ. ದ್ರಾವಿಡ ಸಂಸ್ಕೃತಿಯನ್ನು ಪ್ರತಿನಿಧಿಸುವ ರಾವಣಾದಿಗಳು ಆರ್ಯರಿಂದ ಅನುಭವಿಸಿದ ಹೀಯಾಳಿಕೆಯನ್ನು ಸ್ವತಃ ವಿರೋಧಿಸುವ ಮಾತುಗಳು ರಾವಣನ ಬಾಯಿಯಿಂದಲೇ ಬರುತ್ತವೆ.

*"ಮಿಥಿಳೆಗಾಂ ಮರಳಿ ಪೋಪನಿತರೊಳೆ ರಾಜರ್ಷಿ*
*ತನುಜೆಯುಂ ದಶರಥಕುಮಾರಂಗೆರೆದ ವಾರ್ತೆ*
*ಬಂದೆತ್ತನಗೆ ! ಜನಕನಾ ಗೆಯ್ಮೆ ಸೋಜಿಗಮೆ ?*
*ಆರ್ಯರಾದರಿಗೆಮ್ಮ ಕೂಡೆ ಕೊಳುಕೊಡೆ ನಂಟು*
*ಪೇಸಂತೆ ನಾವು ರಾಕ್ಷಸರಂತೆ ! ನೀನರಿಯೆ*
*ನಮ್ಮನೆಂತವರು ಬಣ್ಣಿಪರೆಂಬುದಂ ! ದಶಶಿರಂ*
*ಎಂಬೆನ್ನ ಬಿರುದವನರೀರೈದು ತಲೆಯೆಂದು*
*ಚಿತ್ರಿಪರ್ ! ದಶರಥನನಂತು ನಾಂ ಚಿತ್ರಪೆವೆ ?*
*..............................*
*ನಮ್ಮ ಪೆಣ್ಗಳನವರ್*
*ಕೋರೆಗಳ ಕೋಡುಗಳ್ವೆರಸಿ ಬರೆದಪರಂತೆ !*
*ನಾವು ನರರಂ ಕಡಿದು, ಬಿಸಿನೆತ್ತರಂ ಕುಡಿದು*
*ಬರ್ದುಕುವವರಂತೆ ! ಸಂಸ್ಕೃತಿ ನಮ್ಮೊಳಿನಿಸಾನುಮೇನ್*
*ಇಲ್ಲಂತೆ ! ರಾಕ್ಷಸ ಕುಲದ ನಾವು ರಾಕ್ಷಸರೆ*
*ದಿಟಮಂತೆ !"*[1]

ರಾವಣನ ಈ ಮಾತುಗಳು ಇತಿಹಾಸವನ್ನು ತಿರುಚಿದ ಆರ್ಯ ಸಂಸ್ಕೃತಿಯ ಹುನ್ನಾರಗಳನ್ನೂ ಅದಕ್ಕೆ ಸೆಡ್ಡು ಹೊಡೆಯುತ್ತಿರುವ ದ್ರಾವಿಡ ಸಂಸ್ಕೃತಿಯ ಸಮಕಾಲೀನತೆಯನ್ನೂ ಒಟ್ಟಿಗೆ ಧ್ವನಿಸುತ್ತವೆ. ಮುಂದೆ ರಾವಣನೂ ರಾಮತ್ವವನ್ನು ಪಡೆಯುವ ಸನ್ನಿವೇಶದ ಮೂಲಕ ಸಾಂಸ್ಕೃತಿಕ ಸಂಘರ್ಷವನ್ನು ಸಾಮರಸ್ಯಕ್ಕೆ ತಂದು ನಿಲ್ಲಿಸುವ ಕುವೆಂಪು ಚಿಂತನೆಯ ಕ್ರಮವನ್ನು ಗಮನಿಸಬೇಕು. ವಾನರರು ರಾಕ್ಷಸರು, ಆರ್ಯರು ಎಲ್ಲರೂ ಸಮಾನರೆಂಬ ಆಶಯ ಅವರದಾಗಿದ್ದು ಕಡೆಗೆ ಶ್ರೀರಾಮನೇ ಆದರ್ಶವಾಗುತ್ತಾನೆ. ಆದರೆ ಶ್ರೀರಾಮನು ವಾನರ ಸಂಸ್ಕೃತಿಯನ್ನಾಗಲಿ, ದ್ರಾವಿಡ ಸಂಸ್ಕೃತಿಯನ್ನಾಗಲಿ ಕೀಳಾಗಿ ಕಾಣದೆ ಉದಾತ್ತನಾಗಿರುತ್ತಾನೆ. ಸಂಸ್ಕೃತಿಯಲ್ಲಿ ಉದಾತ್ತತೆಯನ್ನೇ ಮೌಲ್ಯವಾಗಿ ಸ್ವೀಕರಿಸಿದ ಕುವೆಂಪು ವಾನರ ಸಂಸ್ಕೃತಿ ಮತ್ತು ದ್ರಾವಿಡ ಸಂಸ್ಕೃತಿಯನ್ನು ದ್ವೇಷ ಮಾಡದೆ ರಾಮನ ಕಾಣ್ಕೆಯ ಮೂಲಕ ತಮ್ಮ ಚಿಂತನೆಯ ನೆಲೆ ತಲುಪುತ್ತಾರೆ.

ಕುವೆಂಪು ಅವರು 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಆಧುನಿಕ ಕಾಲಘಟ್ಟದ ಮಾನವೀಯ ಸಂವೇದನೆಗಳನ್ನು ಕಾಣುತ್ತೇವೆ. ಅಗ್ನಿಪ್ರವೇಶದಲ್ಲಿ ಸೀತೆಯ ಜೊತೆಯಲ್ಲಿ ರಾಮನು ಅಗ್ನಿಪ್ರವೇಶ ಮಾಡುತ್ತಾನೆ. ಸ್ತ್ರೀ - ಪುರುಷರ ನಡುವೆ ಸಮಾನತೆಯ ಭಾವನೆಯನ್ನು ಎತ್ತಿ ತೋರಿಸಿದ್ದಾರೆ. ಕುವೆಂಪು ಅವರ ದಾರ್ಶನಿಕ ಕೊಡುಗೆಗೆ ಈ ಎಲ್ಲ ಸಂಗತಿಗಳು ನಿದರ್ಶನವಾಗಿವೆ.

ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಹಾಗು 'ಮಲೆಗಳಲ್ಲಿ ಮದುಮಗಳು' ಆಧುನಿಕ ಕನ್ನಡ ಸಾಹಿತ್ಯದ ಮಹತ್ವದ ಕೃತಿಗಳಾಗಿವೆ. ಒಂದು ಕಾಲದ ಸಾಮಾಜಿಕ, ಧಾರ್ಮಿಕ ಹಾಗೂ ಸಾಮುದಾಯಿಕ ಬದುಕಿನ ಸಮಗ್ರ ವ್ಯಾಖ್ಯೆಯೊಂದನ್ನು ಈ ಕೃತಿಗಳು ನಮಗೆ ಒದಗಿಸಿಕೊಟ್ಟಿವೆ. ಕುವೆಂಪು ಅವರ ಪಾಶ್ಚಾತ್ಯ ತತ್ವದರ್ಶನ

ಹಾಗು ಭಾರತೀಯ ಆಧ್ಯಾತ್ಮಿಕ ದರ್ಶನದ ಬಗೆಗೆ ಡಿ.ಎಸ್. ನಾಗಭೂಷಣ ಅವರು ಅಭಿಪ್ರಾಯ ತಿಳಿಸುತ್ತ "ಕಾನೂರು ಹೆಗ್ಗಡಿತಿ ಹೇಳುವ ಸತ್ಯವಾದರೂ ಏನು ? ಅದು ನೀಡುವ ದರ್ಶನವಾದರೂ ಯಾವುದು? ಹಾಗೆ ನೋಡಿದರೆ ಎರಡೂ ಕಾದಂಬರಿಗಳು ಹೇಳುವುದು ಕುವೆಂಪು ಅರಿವಾಗಿಸಿಕೊಂಡಿದ್ದ ಅದ್ವಯ ತತ್ವದ ಆತ್ಯಂತಿಕ ಕಾಣ್ಕೆಯಾದ ಪೂರ್ಣದೃಷ್ಟಿಯ ಆತ್ಮವಿಕಾಸದ ಕಥೆಗಳನ್ನೇ. ಆದರೆ ಆತ್ಮವಿಕಾಸದ ಈ ಕಥೆಗಳು ಹೇಳಲ್ಪಡುವ ಉದ್ದೇಶ ಹಾಗು ಬಗೆ, ಅವುಗಳನ್ನು ಸಂಸ್ಕೃತಿ ವಿಕಾಸದ ಕಥೆಗಳನ್ನಾಗಿಯೂ, ಕುವೆಂಪು ಅವರನ್ನು ಮಹಾನ್ ಸಾಂಸ್ಕೃತಿಕ ಕಥನಕಾರರನ್ನಾಗಿಯೂ ಮಾಡಿ ಬಿಡುತ್ತವೆ. ಕಾನೂರು ಹೆಗ್ಗಡತಿ ಹೂವಯ್ಯನ ಪ್ರಜ್ಞಾ ವಿಸ್ತಾರದಲ್ಲಿ ವಿನ್ಯಾಸಗೊಳ್ಳುವ ಕಥೆ. ಕೆ.ವಿ. ಸುಬ್ಬಣ್ಣನವರು ವರ್ಣಿಸಿರುವಂತೆ ವಸಾಹತುಶಾಹಿಯ ಒಂದು ವಿಶಿಷ್ಟ ಸಂದರ್ಭದಲ್ಲಿನ ಪೂರ್ವಪಶ್ಚಿಮಗಳ ಮುಖಾಮುಖಿಯಲ್ಲಿ ಕಡೆದು ನಿಲ್ಲುವ 'ಗೊಮ್ಮಟಪ್ರತಿಭೆ' ಯಂತಿರುವ ಹೂವಯ್ಯನ ವ್ಯಕ್ತಿತ್ವದ ವಿಕಾಸದ ಜೊತೆಯಲ್ಲೇ ಅವನ ಸುತ್ತಲಿನ ಜಗತ್ತು ವಿಕಾಸಗೊಳ್ಳುವಲ್ಲಿ ಉಂಟಾಗುವ ಹಿಂಸೆ ಕನ್ನಡ ಭಾಷೆ ಹಾಗು ಸಂಸ್ಕೃತಿಗಳ ಚಲನಶೀಲಗೊಳಿಸುವಂತಹ ಪಾತ್ರಗಳನ್ನು ನಿರೂಪಣೆಗಳನ್ನು ಸೃಷ್ಟಿಸುತ್ತಾ, ಆಧುನಿಕ ಕನ್ನಡ ಕಥನ ಕಲೆಗೆ ಒಂದು ಪೂರ್ಣದೃಷ್ಟಿಯ ಪ್ರಭೆಯನ್ನು ತಂದೊದಗಿಸಿಬಿಡುತ್ತದೆ. ಹೂವಯ್ಯನ ಕಥೆ ಅವನ ಪ್ರಜ್ಞಾವಿಸ್ತಾರಕ್ಕೆ ಜಡ-ಚೇತನಗಳೆಂಬ ತಾರತಮ್ಯವಿಲ್ಲದೆ ನೆಪವಾಗಿ ಬರುವ ಗಿಡ ಮರ ತೊರೆ ಪರ್ವತ ಪಂಕ್ತಿ ಪಕ್ಷಿ ಪ್ರಾಣಿಗಳೂ ಸೇರಿದಂತೆ ವಿವಿಧ ಪ್ರಜ್ಞಾಸ್ತರಗಳಲ್ಲಿರುವ ಎಲ್ಲರ, ಎಲ್ಲದರ ಕಥೆಯಾಗಿ ಸಮಗ್ರಗೊಳ್ಳುವ ಪರಿ ಕನ್ನಡಕ್ಕೆ ಹೊಸದಾಗಿದೆ. 'ಇಲ್ಲಿ ಯಾರೂ ಮುಖ್ಯರಲ್ಲ, ಇಲ್ಲಿ ಯಾರೂ ಅಮುಖ್ಯರಲ್ಲ.....' ಇತ್ಯಾದಿಯನ್ನು ಕುವೆಂಪು ಮಲೆಗಳಲ್ಲಿ ಮದುಮಗಳು ಕೃತಿಯ ಆದಿಯಲ್ಲಿ ಹೇಳಿರುವರಾದರೂ ಆ ಪೂರ್ಣ ದೃಷ್ಟಿಯ ರಾಚನಿಕತೆ ಕಾನೂರು ಹೆಗ್ಗಡತಿಯಲ್ಲೇ ಆರಂಭವಾಗಿರುವುದನ್ನು ಇಲ್ಲಿ ಕಾಣಬಹುದು. ಪೂರ್ಣದೃಷ್ಟಿ ಎಂದರೆ ಯಾವುದೋ ಪಾರಲೌಕಿಕ ಶಕ್ತಿಫಲವಲ್ಲ. ತನ್ನ ಪ್ರಜ್ಞಾ ಪರಿಧಿಯಲ್ಲಿರುವುದೆಲ್ಲವನ್ನೂ ಅವಿಭಾಜ್ಯವಾಗಿ ಗ್ರಹಿಸುವ ಮೂಲಕ ಸತ್ಯ ಸಾಕ್ಷಾತ್ಕಾರ ಮಾಡಿಕೊಳ್ಳುವ ಕೌಶಲ."[2] ಎಂಬ ಅಭಿಪ್ರಾಯಗಳು ಸಮರ್ಥನೀಯವಾಗಿವೆ. ಕುವೆಂಪು ಅವರ ಸಾಮಾಜಿಕ ದೃಷ್ಟಿ, ಬದುಕಿನ ಅನುಭವಗಳ ಹಿನ್ನೆಲೆಯಲ್ಲಿ ಹೂವಯ್ಯನ ಪಾತ್ರ ಸೃಷ್ಟಿಯಾಗಿದೆ. ಹೂವಯ್ಯ ಭಾವ ಸಮಾಧಿಯಲ್ಲಿ ಮುಳುಗುವುದು ಬದುಕಿನ ವಾಸ್ತವ ಹಾಗು ರಮ್ಯ ಆದರ್ಶವಾದದ ನಡುವಿನ ಮುಖಾಮುಖಿಯಾಗಿ ಕಂಡು ಬರುತ್ತದೆ. ಈ ಮುಖಾಮುಖಿಯಲ್ಲಿಯೆ ಕಾದಂಬರಿಯ ಸತ್ಯದರ್ಶನವೂ ಹೊಮ್ಮುತ್ತದೆ. ಸುತ್ತಲಿನ ಪ್ರಪಂಚಕ್ಕೆ ಮುಖ್ಯವಾದುದು ಹೂವಯ್ಯನಿಗೆ ಹಾಸ್ಯಾಸ್ಪದವಾಗಿ ತೋರುತ್ತದೆ. ಹಾಗಾಗಿಯೇ ಹೂವಯ್ಯ ತನ್ನ ತಾಯಿ, ತಮ್ಮ ಮತ್ತು ಹೃದಯ ಸಂಗಾತಿ ಸೀತೆ ಅನುಭವಿಸಬೇಕಾಗಿ ಬಂದ ದಾರುಣ ಹಿಂಸೆಯಿಂದ ಜರ್ಜರಿತನಾಗಿ ವಿವಿಧ ಸ್ತರಗಳ ಧ್ಯಾನಾವಸ್ಥೆಗಳ ಮೂಲಕ ಹಾದು ಹೋಗಿ ಅಂತಿಮವಾಗಿ ಸತ್ಯದ ಸಾಕ್ಷಾತ್ಕಾರಕ್ಕಾಗಿ ಆರಿಸಿಕೊಳ್ಳುವುದು ಬುದ್ಧದರ್ಶನವನ್ನು. ಪ್ರಕೃತಿಯ ಮುಯ್ಯಿಗೆ ಸಿಕ್ಕು ಜರ್ಜರಿತನಾಗಿದ್ದ ಹೂವಯ್ಯನಿಗೆ ಬುದ್ಧದರ್ಶನ ಪ್ರಕೃತಿಯನ್ನು ಗೆದ್ದು ಉದ್ಧಾರವಾಗುವ ನಿಜದ ಹಾದಿಯನ್ನು ತೋರಿಸಿದೆ. ಕುವೆಂಪು ಅವರು ಬುದ್ಧ, ಪರಮಹಂಸ, ವಿವೇಕಾನಂದ, ಗಾಂಧಿ, ಅರವಿಂದ ಮೊದಲಾದ ಮಹಾಪುರುಷರ ಪ್ರಭಾವದಿಂದ ಪಡೆದ ಆಧ್ಯಾತ್ಮಿಕ ದರ್ಶನವನ್ನು ಕಾಣಬಹುದಾಗಿದೆ.

ಕುವೆಂಪು ಅವರು 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳ ಮೂಲಕ ಬದಲಾಗುತ್ತಿರುವ ಗ್ರಾಮೀಣ ಸಮಾಜದ ವ್ಯವಸ್ಥೆಯ ಬದುಕಿನ ಒಳ ಸ್ಥಿತ್ಯಂತರಗಳನ್ನು ಅನಾವರಣ

ಮಾಡುತ್ತಾರೆ. ವಸಾಹತುಶಾಹಿ ವ್ಯವಸ್ಥೆಯು ತಂದೊಡ್ಡಿದ ಹೊಸ ಆಕರ್ಷಕಗಳು ಹಿಂದೂ ಧರ್ಮದ ಮೌಢ್ಯ, ದೌರ್ಬಲ್ಯಗಳು ಈ ಎಲ್ಲ ಸಂಗತಿಗಳ ದರ್ಶನವನ್ನು ಕುವೆಂಪು ಅವರ ಕಾದಂಬರಿಗಳು ಕಟ್ಟಿಕೊಡುತ್ತವೆ. ಕುವೆಂಪು ಅವರು ತಮ್ಮ ಬದುಕು ಬರಹಗಳಲ್ಲಿ ಪ್ರತಿಪಾದಿಸುತ್ತಿದ್ದ ವೈಚಾರಿಕ ನಿಲುವುಗಳು, ಪುರೋಹಿತಶಾಹಿಯ ವಿರೋಧ, ಆಧ್ಯಾತ್ಮಿಕ ದರ್ಶನವನ್ನು ಅವರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

ಕುವೆಂಪು ಅವರ ಆಧ್ಯಾತ್ಮಿಕ ಜೀವನ ಹಾಗೂ ಸಾಹಿತ್ಯದ ಮೇಲೆ ಪ್ರಭಾವ ಬೀರಿದ ವಿಚಾರಗಳ ಬಗ್ಗೆ ಜಿ.ಎಸ್. ಶಿವರುದ್ರಪ್ಪನವರು "ಕುವೆಂಪು ಅವರು ತಮ್ಮ ವಿಸ್ತಾರವಾದ ಅಧ್ಯಯನದ ಮೂಲಕ ಅರಗಿಸಿಕೊಂಡ ಭಾರತೀಯ ಹಾಗು ಪಾಶ್ಚಾತ್ಯ ಸಾಹಿತ್ಯ, ತತ್ವಜ್ಞಾನ ಪರಂಪರೆಗಳು ಅವರ ವ್ಯಕ್ತಿತ್ವದ ಮೇಲೆ ಗಾಢವಾದ ಪ್ರಭಾವ ಬೀರಿವೆ. ಶ್ರೀ ರಾಮಕೃಷ್ಣಪರಮಹಂಸರ ಸರ್ವಧರ್ಮ ಸಮನ್ವಯ ದೃಷ್ಟಿ, ಅರವಿಂದರ ಪೂರ್ಣಯೋಗ, ಸಮರ್ಪಣಭಾವ, ಆಧ್ಯಾತ್ಮಿಕತೆ, ವಿವೇಕಾನಂದರ ವಿಚಾರಧಾರೆಗಳು, ಗಾಂಧೀಜಿಯವರ ಸರ್ವೋದಯ ಆದರ್ಶಗಳು ಈ ಎಲ್ಲ ಸಂತಶ್ರೇಷ್ಠರ ಪ್ರಭಾವಗಳಿಂದ ರೂಪುಗೊಂಡ ಅಧ್ಯಾತ್ಮಿಕ-ಸಾಮಾಜಿಕ ನಿಲುವುಗಳು ಕುವೆಂಪು ಅವರ ಸೃಜನಶೀಲ ವ್ಯಕ್ತಿತ್ವದ, ದಾರ್ಶನಿಕ ದೃಷ್ಟಿಯ ಮೂಲ ದ್ರವ್ಯಗಳಾಗಿವೆ"[೮] ಎಂಬುದಾಗಿ ತಿಳಿಸಿದ್ದಾರೆ. ಈ ಅಭಿಪ್ರಾಯಗಳು ಒಪ್ಪುವ ಸಂಗತಿಗಳಾಗಿವೆ.

ಕುವೆಂಪು ಅವರು ಪ್ರಕೃತಿಯ ಸೊಬಗಿನಲ್ಲಿಯೆ ಸೃಷ್ಟಿಯ ಮೂಲ ಚೈತನ್ಯದ ದರ್ಶನವನ್ನು ಪಡೆಯುತ್ತಾರೆ. 'ಬಾ ಫಾಲ್ಗುಣ ರವಿದರ್ಶನಕೆ' ಇನ್ನು ಮುಂತಾದ ಪ್ರಕೃತಿ ಚಿತ್ರಣವನ್ನು ಕುರಿತಾದ ಕವಿತೆಗಳಲ್ಲಿ ನಿಸರ್ಗದ ಸೌಂದರ್ಯದಲ್ಲಿಯೆ ದೇವರ ಇರುವಿಕೆಯನ್ನು ಕಾಣುತ್ತಾರೆ.

*"ಶಿವಮಂದಿರ ವನ ಸುಂದರ ಸುಮಶೃಂಗಾರದ ಗಿರಿಶೃಂಗಕೆ ಬಾ*

*ಬಾ ಫಾಲ್ಗುಣ ರವಿದರ್ಶನಕೆ...."*[೯]

ಹೀಗೆ ಫಾಲ್ಗುಣ ರವಿದರ್ಶನದಲ್ಲಿ ಅಪೂರ್ವವಾದ ಚೇತನ ಶಕ್ತಿಯನ್ನು ಕಾಣುತ್ತಾರೆ. ನಿಸರ್ಗ ಸೌಂದರ್ಯಾನುಭವದಿಂದ ಮನುಷ್ಯ ದೈವಿಕ ನೆಲೆಯನ್ನು ತಲುಪಬಹುದೆಂಬ ದರ್ಶನವನ್ನು ಕುವೆಂಪು ತಿಳಿಸಿದ್ದಾರೆ. ದೇವರನ್ನು ಕುರಿತ ಸಾಂಪ್ರದಾಯಿಕ ನಂಬಿಕೆಗಳಿಗೆ ವಿರುದ್ಧವಾದ ಹೊಸದರ್ಶನವನ್ನು ಕಾಣುತ್ತೇವೆ. ಪ್ರಕೃತಿಯ ಆರಾಧನೆಯಲ್ಲಿಯೆ ಪರಮಾತ್ಮನ ಇರುವಿಕೆಯನ್ನು ಗುರುತಿಸುತ್ತದೆ ಕವಿದರ್ಶನ. ಮನುಷ್ಯ ನಿರ್ಮಿತವಾದ ಗುಡಿ, ಚರ್ಚು, ಮಸೀದಿಗಳನ್ನು ನಿರಾಕರಿಸಿ ನಿಸರ್ಗದ ದೇವಾಲಯವನ್ನು ಎತ್ತಿ ಹಿಡಿಯುತ್ತಾರೆ.

ಕುವೆಂಪು ಅವರು ಪುರೋಹಿತಶಾಹಿ, ಮೌಢ್ಯತೆ ಅರ್ಥವಿಲ್ಲದ ಸಂಪ್ರದಾಯ, ಆಚರಣೆಗಳನ್ನು ನಿಷ್ಠುರವಾಗಿ ಖಂಡಿಸಿದ್ದಾರೆ. ಕುವೆಂಪು ಅವರ ದಾರ್ಶನಿಕತೆಯನ್ನು ದೇಜಗೌ ಅವರು ವಿವರವಾಗಿ ತಿಳಿಸಿದ್ದಾರೆ. ಗುರು, ನಾಡುನುಡಿಯ ಪ್ರೇಮ, ನಿಸರ್ಗಪ್ರೇಮ, ಪ್ರಾರ್ಥನೆ ಹಾಗು ತಪಸ್ಸು, ದೇವರು, ಧರ್ಮ, ಜಾತಿ ಮತ, ವೈಜ್ಞಾನಿಕ ದೃಷ್ಟಿ, ವಿಚಾರಕ್ರಾಂತಿ ಈ ಎಲ್ಲ ವಿಚಾರಗಳ ಬಗ್ಗೆ ಕುವೆಂಪು ಅವರ ನಿಲುವನ್ನು ಸಮರ್ಥವಾಗಿ ಸ್ಪಷ್ಟಪಡಿಸಿದ್ದಾರೆ. "ನಿಸರ್ಗದ ಕೃಪೆಗೆ ಪಾತ್ರರಾದ, ಅದರಿಂದ ತಮ್ಮ ಆತ್ಮಶಕ್ತಿಯನ್ನೆಲ್ಲ ಪಡೆದ ಕುವೆಂಪು ಅಂಥವರಿಗೆ ಇಡೀ ಜಗತ್ತೇ ದೇಗುಲವಾಗುತ್ತದೆ. ಕನಕದಾಸರಂತೆ ಎಲ್ಲೆಲ್ಲೂ ದೇವರನ್ನೇ ದರ್ಶಿಸುತ್ತಾರೆ. ಅವರು ಕಲೋಪಾಸಕರಾದ್ದರಿಂದ ಆತ್ಮಸಾಕ್ಷಾತ್ಕಾರಕ್ಕೆ ಕಲೆಯೇ ಮಾಧ್ಯಮವಾಗುತ್ತದೆ.

*ಚೆಲುವೇ ದೇವರು ಒಲವೇ ಪೂಜೆ*

*ಎಂಬುದೆ ರಸ ಜೀವನದೋಜೆ*

ಇದು ಅವರ ಬಾಳಿನ ಧ್ಯೇಯ ಮಂತ್ರ. ಈ ಮಂತ್ರದ ಅನುಷ್ಠಾನದಿಂದ ಪುರುಷಾರ್ಥ ಲಾಭ ಸಾಧ್ಯ"[೧೦]

ಸೃಷ್ಟಿಕರ್ತನ ಎದರು ಮಾನವ ತೊಟ್ಟಿಲಲ್ಲಿ ಮಲಗಿರುವ ಮಗು ಎಂಬ ದಾರ್ಶನಿಕ ಸಂಗತಿಯನ್ನು 'ಕೂಸಿನ ಕನಸು' ಎಂಬ ಪದ್ಯದಲ್ಲಿ ಹೇಳಿದ್ದಾರೆ.

*'ಕಲ್ಪಾಂತರಗಳ ಸಂಕ್ಷಿಪ್ತಾಕೃತಿ*

*ಜಗಶಿಲ್ಪಿಯ ಯುಗ ಯುಗ ಕರ್ಮದ ಕೃತಿ*

*ಶತಮಾನಂಗಳ ಸಂಗ್ರಹ ಸಂಸ್ಕೃತಿ*

*ಮಲಗಿದೆ ನವಶಿಶು ತೊಟ್ಟಿಲಲಿ'*[೧೧]

ಮಾನವ ತನ್ನ ಜ್ಞಾನದ ಬೆಳವಣಿಗೆಯಿಂದ ಅದ್ಭುತವಾದ ಪ್ರಗತಿಯನ್ನು ಸಾಧಿಸಿದ್ದಾನೆ. ಬೆರಗುಗೊಳಿಸುವಂತೆ ವಿಜ್ಞಾನದ ಬೆಳವಣಿಗೆಯಾಗಿದೆ. ಬೇರೆ ಬೇರೆ ಗ್ರಹಗಳಲ್ಲಿ ವಾಸಿಸಲು ಸಾಧ್ಯವೆ ಎಂಬ ಶೋಧನೆಯಲ್ಲಿ ತೊಡಗಿದ್ದಾನೆ. ಇಷ್ಟೆಲ್ಲ ಸಾಧನೆ ಮಾಡಿದ್ದರು ಸೃಷ್ಟಿಕರ್ತನ ಲೀಲೆಯ ಮುಂದೆ ಮಾನವ ಮುಗ್ಧಮಗುವಿಗೆ ಸಮಾನವಾಗಿದ್ದಾನೆ ಎಂಬ ಕಾಣ್ಕೆಯನ್ನು ಕುವೆಂಪು ತಿಳಿಸಿದ್ದಾರೆ.

ಕುವೆಂಪು ಅವರ ಕಲ್ಕಿ ಕವನ ಅತ್ಯಂತ ಮಹತ್ವಪೂರ್ಣವಾಗಿದೆ. ಸಾಮಾಜಿಕ ಅಸಮಾನತೆಯ ವಿರಾಟ್‌ದರ್ಶನವನ್ನು ಕವನದಲ್ಲಿ ಕಾಣುತ್ತೇವೆ. ಶ್ರೀಮಂತರ ಶೋಷಣೆ, ಅನ್ಯಾಯ, ಅಸಮಾನತೆಯಿಂದ ಬಡಜನತೆ ಸಿಡಿದೆದ್ದರೆ ಮುಂದಾಗಬಹುದಾದ ದುರಂತವನ್ನು ಉಜ್ವಲವಾಗಿ ನಿರೂಪಿಸಿದ್ದಾರೆ. ಬಡವರ ಹಾಗು ಶ್ರೀಮಂತರ ನಡುವಿನ ಅಂತರ ಸಾಮಾಜಿಕ, ಆರ್ಥಿಕ ಅಸಮಾನತೆಯನ್ನು ಹೃದಯಸ್ಪರ್ಶಿಯಾಗಿ ಚಿತ್ರಿಸಿದ್ದಾರೆ.

*"ಧನಿಕರ ಮನೆಗಳು ಒಂದೆಡೆ ನಿಂತಿವೆ,*

*ಬಡವರ ಗುಡಿಸಲು ಒಂದೆಡೆ ನಿಂತಿವೆ*

*ಜ್ಯೋತಿಯ ಮಣಿದೀಪಗಳಲ್ಲಿ;*

*ಕತ್ತಲು ಕಗ್ಗತ್ತಲು ಇಲ್ಲಿ ! .....*

*ಕಲ್ಕಿ ಕಲ್ಕಿ ಎನ್ನುತ ಚೀರಿ*

*ಕನಸೊಡೆದೆದ್ದ*

*ಇನ್ನೆಲ್ಲಿಯ ನಿದ್ದೆ "*[೧೨]

ಹೀಗೆ ಪದ್ಯದಲ್ಲಿ ಬಡವರ್ಗದ ಶೋಷಣೆ. ಅವರ ತಾಳ್ಮೆ ಮಿತಿಯನ್ನು ಮೀರಿದಾಗ ಸಮಾಜದಲ್ಲಿ ಉಂಟಾಗುವ ವಿಷಮ ಸ್ಥಿತಿಯನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಇಲ್ಲಿ ನಿದ್ದೆ ಎಂದರೆ ಮನಸ್ಸಿನ

ನೆಮ್ಮದಿ ಎಂದು ಅರ್ಥ. ಜಗತ್ತಿನ ವಿಷಮ ಸ್ಥಿತಿಯಲ್ಲಿ ಕವಿಯ ಮನಸ್ಸಿಗಾದರು ನೆಮ್ಮದಿ, ನಿಶ್ಚಿಂತೆ ಎಂಬುದು ಉಳಿಯುವುದಿಲ್ಲ ಎಂಬ ಸತ್ಯವನ್ನು ಮನಗಾಣಿಸಿದ್ದಾರೆ.

ಕುವೆಂಪು ಅವರ ವೈಚಾರಿಕತೆಗೆ 'ಇಂದಿನ ದೇವರು' ಕವನ ಉತ್ತಮ ನಿದರ್ಶನವಾಗಿದೆ.

*'ನೂರು ದೇವರನೆಲ್ಲ ನೂಕಾಚೆ ದೂರ*

*ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ.*

...............................

*ಸತ್ತ ಕಲ್ಗಳ ಮುಂದೆ ಅತ್ತು ಕರೆದುದು ಸಾಕು*

*ಜೀವದಾತೆಯನಿಂದು ಕೂಗಬೇಕು'*[೧೩]

ಭಾರತೀಯರಿಗೆಲ್ಲ ಭಾರತಾಂಬೆಯೆ ದೇವಿ ಎಂದು ತಿಳಿಸಿರುವುದು ಕವಿಯ ಉನ್ನತ ದರ್ಶನ ಮತ್ತು ಕೊಡುಗೆಯಾಗಿದೆ. ಯಾಂತ್ರಿಕ ಪೂಜೆಯನ್ನು ನಿರಾಕರಿಸಿ ಭಾರತಾಂಬೆಯನ್ನು ದೇವಿ ಎಂದು ಕರೆದಿದ್ದಾರೆ. ಕಂದಾಚಾರಗಳನ್ನು ತೀಕ್ಷ್ಣವಾಗಿ ಖಂಡಿಸಿ ರಾಷ್ಟ್ರಭಕ್ತಿಯನ್ನು ಬೆಳೆಸಿಕೊಳ್ಳುವ ಎಲ್ಲರೂ ಐಕ್ಯತೆಯಿಂದ ಕೂಡಿ ಬಾಳಬೇಕಾದ ಸಂದೇಶವನ್ನು ಕವಿ ನೀಡಿದ್ದಾರೆ. ಭಾರತದ ಇಂದಿನ ಪರಿಸ್ಥಿತಿಯಲ್ಲಿ ಪ್ರತಿಯೊಬ್ಬರು ರಾಷ್ಟ್ರಪ್ರೇಮವನ್ನು ಬೆಳೆಸಿಕೊಂಡು ಸಾಮರಸ್ಯದಿಂದ ಜೀವನ ನಡೆಸುವುದು ಮುಖ್ಯವಾಗಿದೆ. ಡಿ.ಎಸ್. ನಾಗಭೂಷಣ ಅವರು ಕುವೆಂಪು ಅವರ ವೈಚಾರಿಕ ನಿಲುವುಗಳ ಬಗ್ಗೆ ತಿಳಿಸುತ್ತ "ಭಾರತಾಂಬೆ ಕುವೆಂಪು ಅವರಿಗೆ ವಿಶಾಲತೆ, ಉದಾರತೆ ಹಾಗು ಸಮಾನತೆಗಳನ್ನೊಳಗೊಂಡ ಬಿಡುಗಡೆಯ ಸಂಕೇತವಾಗಿದ್ದಳು"[೧೪] ಎಂದು ಅಭಿಪ್ರಾಯಪಟ್ಟಿದ್ದಾರೆ. ಅವರ ಹೇಳಿಕೆ ಔಚಿತ್ಯಪೂರ್ಣವಾಗಿದೆ ಎಂದು ಭಾವಿಸಬಹುದಾಗಿದೆ.

ಕುವೆಂಪು ಅವರು 'ಶ್ರೀ ಸಾಮಾನ್ಯನೇ ಭಗವದ್ ಮಾನ್ಯಂ' ಎಂಬ ದಾರ್ಶನಿಕ ಕೊಡುಗೆಯನ್ನು ನೀಡಿದ್ದಾರೆ. ಸಣ್ಣದು, ದೊಡ್ಡದು, ಮೇಲು-ಕೀಳು, ಸಾಮಾನ್ಯ ಅಸಾಮಾನ್ಯ ಎಂಬ ಭೇದವನ್ನು ಮನ್ನಿಸುವುದಿಲ್ಲ ಕವಿದರ್ಶನ. ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಆರಂಭದಲ್ಲಿ ಬರುವ ಮಾತು ಇದೇ ತಾತ್ವಿಕತೆಯನ್ನು ಪ್ರತಿಪಾದಿಸುತ್ತದೆ.

*"ಇಲ್ಲಿ*
*ಯಾರೂ ಮುಖ್ಯರಲ್ಲ*
*ಯಾರೂ ಅಮುಖ್ಯರಲ್ಲ*
*ಯಾವುದೂ ಯಃಕಶ್ಚಿತವಲ್ಲ !*
...............................
...................................
*ಇಲ್ಲಿ ಎಲ್ಲಕ್ಕೂ ಇದೆ ಅರ್ಥ*
*ಯಾವುದೂ ಅಲ್ಲ ವ್ಯರ್ಥ*
*ನೀರೆಲ್ಲವೂ ತೀರ್ಥ"*[೧೫]

ಇಲ್ಲಿ ಮುಖ್ಯ ಅಮುಖ್ಯ, ಸಾಮಾನ್ಯ ಅಸಾಮಾನ್ಯ ಎಂಬ ಅಂತರವನ್ನು ಕವಿ ನಿರಾಕರಿಸುತ್ತ ಎಲ್ಲವೂ ಮಹತ್ವದ್ದಾಗಿದೆ ಎಂಬ ಸತ್ಯ ಸಂಗತಿಯನ್ನು ತಿಳಿಸಿದ್ದಾರೆ. ಸಾಮಾನ್ಯವೆನಿಸತಕ್ಕದ್ದು ಅದಕ್ಕೆ ಸನ್ಮಾನ್ಯವೇ. ಕಿರೀಟದ ಮಣಿ ಹುಲ್ಲಿನ ಹನಿ ಎರಡೂ ಅದಕ್ಕೆ ಒಂದೆ.

ಕುವೆಂಪು ಅವರ 'ಜಲಗಾರ' ನಾಟಕ ದಾರ್ಶನಿಕ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾಗಿದೆ. ಉತ್ತಮ ವರ್ಣದವರು ತಮ್ಮ ದೇವಸ್ಥಾನದಿಂದ ದೂರವಿಟ್ಟರೂ 'ಜಗದ ಜಲಗಾರ' ಶಿವ ಸಾಮಾನ್ಯ ಜಲಗಾರನೊಬ್ಬನಿಗೆ ದರ್ಶನ ಕೊಟ್ಟ ಕಥೆ ನಾಟಕದ ವಸ್ತು. ಪುರಾಣದ ವಸ್ತುವನ್ನು ಪಾತ್ರಗಳ ಮೂಲಕ ಪುನರ್‌ವ್ಯಾಖ್ಯಾನ ಮಾಡಿರುವುದು ಕುವೆಂಪು ಅವರ ದಾರ್ಶನಿಕತೆಗೆ ಹಿಡಿದ ಕನ್ನಡಿಯಾಗಿದೆ. ಅರ್ಥವಿಲ್ಲದ ಸಂಪ್ರದಾಯ, ಕಂದಾಚಾರ ಇವುಗಳನ್ನು ಕಸದಂತೆ ಗುಡಿಸಿಹಾಕಬೇಕು ಎನ್ನುವ ಹೊಸದರ್ಶನ ಹಾಗು ವೈಚಾರಿಕ ನಿಲುವನ್ನು ಜಲಗಾರ ನಾಟಕದಲ್ಲಿ ಕಾಣುತ್ತೇವೆ. ಯಾಂತ್ರಿಕ ಪೂಜೆಯ ನಿರಾಕರಣೆ, ಕಾಯಕದ ಮಹತ್ವ, ನಿಸರ್ಗ ಸೌಂದರ್ಯ, ಎಲ್ಲ ಜೀವರಾಶಿಗಳಲ್ಲಿಯೂ ಸಹಾನುಭೂತಿ ಪರವಾದ ದೃಷ್ಟಿ. ಪರಿಶುದ್ಧವಾದ ಮನಸ್ಸು ಈ ಎಲ್ಲ ದರ್ಶನದ ಕೊಡುಗೆಯನ್ನು ಕುವೆಂಪು 'ಜಲಗಾರ' ನಾಟಕದಲ್ಲಿ ನೀಡಿದ್ದಾರೆ. ಜಾತಿ, ವರ್ಣ ವರ್ಗ ಈ ಎಲ್ಲ ಅಸಮಾನತೆಗಳಿಂದ ಬಿಡುಗಡೆ ಹೊಂದುವ ಆಶಯವೆ ಇಲ್ಲಿ ಮುಖ್ಯವಾಗಿದೆ.

*"ಜಗದ ದೇಗುಲದಲ್ಲಿ ಜಗದುದಯ ಕಾರಣನ*
*ಕಾಣದವನೆಂತು ಕಾಣ್ಬನು ಶಿವನ ಗುಡಿಯಲ್ಲಿ?"* [೨]

ಎಂಬ ಮಾತು ಕುವೆಂಪು ಅವರ ದಾರ್ಶನಿಕ ದೃಷ್ಟಿಗೆ ನಿದರ್ಶನವಾಗಿದೆ. ಪುರೋಹಿತಶಾಹಿ ನಿಲುವನ್ನು ವಿರೋಧಿಸುವ ಕುವೆಂಪು ಅವರ ಪ್ರಥಮ ಪ್ರಯತ್ನ ಈ ನಾಟಕ. ಶೂದ್ರವರ್ಗ ಹಾಗು ಶ್ರಮಿಕವರ್ಗದ ಪರವಾದ ಕಾಳಜಿ ವ್ಯಕ್ತವಾಗಿದೆ. ದೇಶದ ಕಟ್ಟಕಡೆಯ ಅನಾಥ ಪ್ರಜೆಯನ್ನು ಪ್ರತಿನಿಧಿಸುವ ಬೀದಿಗೆ ಬಿದ್ದ ಭಿಕ್ಷುಕನ ಮೂಲಕ ಬಂದಿರುವ ಮಾತುಗಳಲ್ಲಿ ಸ್ವಾಭಿಮಾನದ ಆಶಯವಿದೆ. ಜಲಗಾರನಿಗೆ ಶಿವ ಹೊಸ ಆಶಯಗಳನ್ನು ಹೇಳುತ್ತಾನೆ.

*"ಬೀದಿ ಗುಡಿಸುವ ಬಡವನೆದೆಯಲ್ಲಿ ನಾನಿರುವೆ*
*ಉಳುತಿರುವ ಒಕ್ಕಲಿಗನೆದೆಯಲ್ಲಿ ನಾನಿರುವೆ*

*ಎಲ್ಲಿ ಹೊಲೆಯುನು ನನ್ನ ಕಾರ್ಯದಲ್ಲಿ ತೊಡಗಿಹನೊ*
*ಅಲ್ಲಿ ನಾನವನ ಪಕ್ಕದೊಳಿರುವೆ. ಕುಂಟರನು,*
*ಕುರುಡರನು, ದೀನರನು, ಅನಾಥರನು ಕೈಹಿಡಿದು*
*ಪೊರೆಯುತಿಹನೆಡೆಯಿರುವೆ, ಆ ನನ್ನ ಭಕ್ತರಿಗೆ*
*ನನ್ನ ನಿಜರೂಪದಿಂ ಮೈದೋರಿ ಸಲಹುವೆನು*
*ನೀನೆನ್ನ ನಿಜಭಕ್ತನಾಗಿರುವೆ"* [೩]

ಹೀಗೆ ಶಿವನು ದೀನದಲಿತರೊಡನೆ ತನ್ನನ್ನು ಗುರುತಿಸಿಕೊಳ್ಳುವ ಉದಾತ್ತ ಸಂಸ್ಕೃತಿಯ ಪ್ರತಿನಿಧಿಯಾಗುತ್ತಾನೆ. ಕುವೆಂಪು ಅವರ ವೈಚಾರಿಕ ನಿಲುವ ಹಾಗು ಚಿಂತನಶೀಲತೆಯನ್ನು ಕಾಣಬಹುದಾಗಿದೆ. ಪೂಜೆ, ದೇವರು ಮತ್ತು ಧಾರ್ಮಿಕ ನೆಲೆಗಳಿಗೆ ಕುವೆಂಪು ಹೊಸ ಕಾಣ್ಕೆಯನ್ನು ನೀಡಿದ್ದಾರೆ.

ಕುವೆಂಪು ಅವರ 'ಬೆರಳ್‌ಗೆ ಕೊರಳ್' ನಾಟಕ ದರ್ಶನದ ದೃಷ್ಟಿಯಿಂದ ಮಹತ್ವಪೂರ್ಣ ಕೃತಿಯಾಗಿದೆ. ಗುರುತತ್ತ್ವ, ಕರ್ಮತತ್ತ್ವ ಹಾಗು ಯಜ್ಞತತ್ತ್ವ ಈ ಮೂರು ತತ್ವಗಳು ಮೈದಾಳಿರುವ ದಾರ್ಶನಿಕ ಕೃತಿಯಾಗಿದೆ. ಈ ನಾಟಕದ ನಾಯಕ ಏಕಲವ್ಯ. ಹುಟ್ಟಿನಿಂದ ಬೇಡ, ಬಿಲ್ವಿದ್ಯೆಯನ್ನು ಕಲಿಯುವ ಅದಮ್ಯ ಬಯಕೆಯಿದೆ. ಏಕಲವ್ಯ ದುಷ್ಟಪ್ರಾಣಿಗಳಿಂದ ಅಸಹಾಯಕ ಪ್ರಾಣಿಗಳನ್ನು ರಕ್ಷಿಸಲು ಬಿಲ್ವಿದ್ಯೆ ಕಲಿಯಲು ಇಷ್ಟಪಡುತ್ತಾನೆ. ಮಹಾನ್ ಗುರುವಾದ ದ್ರೋಣನ ಹತ್ತಿರ ವಿದ್ಯೆ ಕಲಿಯಬೇಕೆಂದು ತನ್ನ ಇಚ್ಛೆಯನ್ನು ತಂದೆಯ ಹತ್ತಿರ ಪ್ರಕಟಿಸಿದಾಗ ಅವನ ತಂದೆ ಹೇಳುವ ಮಾತಿದು.

*"ಅವರ್ ಪಾರ್ವರ್*
*ಬಿಯದರ್ಗೆ ಒವಜುಗೆಯ್ಯಲ್ಕೆ ಒಪ್ಪರ್*
*ನಿನ್ನನ್ ಗಹಗಹಿಸಿ ನಕ್ಕುನೂಂಕುವರ್"*[18]

ಅಂದಿನ ಕಾಲದಲ್ಲಿ ಶೂದ್ರವರ್ಗದವರಿಗೆ ವಿದ್ಯೆ ಪಡೆಯುವ ಅವಕಾಶವಿರಲಿಲ್ಲ. ಆದರೆ ಕುವೆಂಪು ಅವರು ಚಿತ್ರಿಸಿರುವ ದ್ರೋಣ ಏಕಲವ್ಯನಿಗೆ ಕಲಿಸಲು ಒಪ್ಪುತ್ತಾನೆ. ವಿರೋಧಿಸುವವರು ಪಾಂಡವರು. ಗುರು ಎನ್ನುವ ಶಬ್ದ ಕುವೆಂಪು ಅವರಿಗೆ ಪವಿತ್ರವಾದುದು. ಕುವೆಂಪು ಅವರು ಇಡೀ ನಾಟಕವನ್ನು ಒಂದು ಹೊಸ ದೃಷ್ಟಿಯಿಂದ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಈ ನಾಟಕದಲ್ಲಿ ಕುವೆಂಪು ಕಾಡು ಮತ್ತು ನಾಡಿನ ಸಂಸ್ಕೃತಿ, ನಾಗರಿಕತೆಗಳನ್ನು ಮುಖಾಮುಖಿಯಾಗಿಸುತ್ತಾರೆ. ಮುಖ್ಯವಾಗಿ ಕಾಣುವ ಅಂಶವೆಂದರೆ ನಾಡಿನವರ ನಾಗರಿಕತೆಯ ಅಹಂಕಾರ ಮತ್ತು ಕಾಡಿನ ಏಕಲವ್ಯ ಮತ್ತು ಅವನ ತಾಯಿಯ ಸಾಂಸ್ಕೃತಿಕ ಸೌಜನ್ಯ. ಈ ನಾಟಕದಲ್ಲಿ ಪಟ್ಟಭದ್ರ ವ್ಯವಸ್ಥೆ ಶೂದ್ರನೊಬ್ಬ ಅಸಾಮಾನ್ಯ ವಿದ್ಯಾವಂತವಾದುದನ್ನು ಸಹಿಸಲಾಗದೆ ಅವನನ್ನು ಬಲಿತೆಗೆದುಕೊಳ್ಳುವುದು ಹೇಗೆಂದು ಹುನ್ನಾರ ಮಾಡುತ್ತಿರುತ್ತದೆ. ಅದಕ್ಕೆ ಗುರು ದ್ರೋಣನನ್ನು ಬಳಸಿಕೊಳ್ಳುತ್ತದೆ. ಇನ್ನೊಂದು ಕಡೆ ಏಕಲವ್ಯನ ತಾಯಿಯ ಮುಗ್ಧ ಪ್ರೀತಿ ಅವನನ್ನು ಕಾಪಾಡಿಕೊಳ್ಳಲು ಕಾತರವಾಗಿರುತ್ತದೆ. ದ್ರೋಣ ಅರ್ಜುನನ ಮಾತಿಗೆ ಕಟ್ಟುಬಿದ್ದು ಏಕಲವ್ಯನ ಹೆಬ್ಬೆರಳು ಪಡೆದು ಜಗದ ಅತಿ ದೊಡ್ಡಕಳಂಕಕ್ಕೆ ಈಡಾಗುತ್ತಾನೆ. ಏಕಲವ್ಯನಂತಹ ಮುಗ್ಧರಿಗೆ ಕೇಡಕನ್ನು ಮಾಡಿದರೆ ಆ ಪಾಪ ಕಾಡದೆ ಬಿಡುವುದಿಲ್ಲ ಎನ್ನುವ ಸತ್ಯವನ್ನು ನಾಟಕದ ಅಂತ್ಯದಲ್ಲಿ ಕಾಣುತ್ತೇವೆ.

*"ಆರ್ಗೊ ಬಲಿ ನನ್ನ ಕಂದನ ಬೆರಳ್*
*ಬಲಿಯಕ್ಕೆ ಈ ಪಾಪಿಯ ಕೊರಳ್"*[19]

ಎಂದು ಏಕಲವ್ಯನ ಅಬ್ಬೆ ಆಡುವ ಮಾತುಗಳಲ್ಲಿ ಮಾತೃಹೃದಯದ ಶಾಪ ತಟ್ಟದೆ ಬಿಡುವುದಿಲ್ಲ ಎಂಬ ಸತ್ಯವನ್ನು ಕಾಣುತ್ತೇವೆ. ಅಲ್ಲದೆ ನಾಗರಿಕ ಮಾನವನ ಹಲವು ಪಾಪಗಳಿಗೆ ಸಮಷ್ಟಿ ಬದುಕು

ಬಲಿಯಾದ ಸಂಗತಿಯನ್ನು ಕುವೆಂಪು ತಮ್ಮ ದಾರ್ಶನಿಕ ಪ್ರತಿಭೆಯಿಂದ ತಿಳಿಸಿದ್ದಾರೆ.

ಕುವೆಂಪು ಅವರ 'ಶ್ಮಶಾನ ಕುರುಕ್ಷೇತ್ರಂ' ನಾಟಕ ಒಂದು ಅಪೂರ್ವ ಕೃತಿಯಾಗಿದೆ. ಇದರ ಹಿನ್ನೆಲೆ ವಿಸ್ತಾರವಾದುದು ಮತ್ತು ವ್ಯಾಪ್ತಿ ಹಿರಿದಾದುದು. ಭೀಕರ ದುರಂತದಲ್ಲಿ ಕೊನಗೊಂಡ ಕುರುಕ್ಷೇತ್ರದ ಭಯಾನಕವಾದ ರುದ್ರ ಸನ್ನಿವೇಶವನ್ನು ಒಳಗೊಂಡಿದೆ. ವಿನಾಶದ ಗರ್ಭದಲ್ಲಿಯೆ ನವ ಸೃಷ್ಟಿಯ ಬೀಜವೂ ಹುದುಗಿದೆ ಎಂಬ ದರ್ಶನವನ್ನು ಕಾಣುತ್ತೇವೆ. ದ್ವಾಪರ ತನ್ನ ಯುಗದ ಅಂತ್ಯದಲ್ಲಿ ಸಂಭವಿಸಿದ ಭೀಕರ ಯುದ್ಧದಿಂದ ವಿನಾಶದಿಂದ ತಲ್ಲಣಿಸಿ ಹೋಗಿದ್ದಾನೆ.

*"ಎನ್ನಾಳ್ವಿಕೆಯ ತುತ್ತತುದಿಯೊಳ್ ವೀರಾತ್ಮಕ*
*ಎನಿತಳಿದು ಪೋಗಿಹರ್ ? ಶಿವ ಶಿವಾ ಮಸಣಮೆನಗೆ*
*ಈ ಚರಮ ಸೋಪಾನಮಾದುದೆ ?"*[20]

ಹೀಗೆ ಹಲವಾರು ಜನ ಮಹಾನುಭಾವರು, ವೀರರು ಮಡಿದು ಹೋದರಲ್ಲ ಎಂದು ಶೋಕಿಸುತ್ತಾನೆ. ಕಲಿದೇವ ಆತನನ್ನು ಸಂತೈಸುತ್ತಾನೆ. "ಸಾವಿನಲ್ಲಿ ಹೊಸಬಾಳು ಹುದುಗಿಹುದು ನಾಶದಲ್ಲಿ ನವಸೃಷ್ಟಿ ಪವಡಿಸಿದೆ ನಿರಾಶನಾಗಬೇಡ" ಎಂದು ಸಂತೈಸುತ್ತಾನೆ. ಹಿಂದಿನ ಯುಗವೆ ಶ್ರೇಷ್ಠ ಕಲಿಯುಗದಲ್ಲಿ ಧರ್ಮ ಹಾಳಾಯಿತು ಎನ್ನುವ ಸಂಪ್ರದಾಯವಾದಿಗಳಿಗೆ ಕುವೆಂಪು ಅವರು ಹೊಸ ದರ್ಶನವನ್ನು ನೀಡಿದ್ದಾರೆ. ಎಲ್ಲ ಕಾವ್ಯ ಒಂದಲ್ಲ ಒಂದು ರೀತಿಯಲ್ಲಿ ಮಹತ್ವಪೂರ್ಣವಾದುದು ಎಂಬ ಸತ್ಯವನ್ನು ಮನಗಾಣಿಸಿದ್ದಾರೆ. ಸೃಷ್ಟಿಯಲ್ಲಿ ವಿಕಾಸಶೀಲತೆ ಅಡಗಿದೆ. ಒಂದು ಯುಗದ ಅಳಿವಿನಲ್ಲಿಯೆ ಮತ್ತೊಂದು ಯುಗದ ಉದಯ ಅಡಗಿರುತ್ತದೆ.

ವಾಸ್ತವವಾಗಿ ಧರ್ಮ ಯುಗದಿಂದ ಯುಗಕ್ಕೆ ಬೆಳೆಯುತ್ತ ಬರುತ್ತಿದೆ. ಹಿಂದಿನದರ ಅನುಭವದ ಬೆನ್ನನ್ನು ಅವಲಂಬಿಸಿ ಅದಕ್ಕಿಂತ ಮಿಗಿಲಾದ ಎತ್ತರದಲ್ಲಿ ನಿಲ್ಲುವ ವಿಕಾಸದ ಕಡೆಗೆ ಸೃಷ್ಟಿ ನಡೆಯುತ್ತಿದೆ- ಎಂಬ ಸತ್ಯವನ್ನು ಕವಿ ನಿರೂಪಿಸಿದ್ದಾರೆ. ಯುದ್ಧದಿಂದ ಉಂಟಾಗುವ ಹಿಂಸೆ, ಸಾವು, ನೋವುಗಳು ಮುಗ್ಧಜನರ ಬಾಳನ್ನು ಒಸಕಿಹಾಕುತ್ತವೆ ಎಂಬ ದರ್ಶನವನ್ನು ಕವಿ ತಿಳಿಸಿದ್ದಾರೆ.

ಸರ್ವೋದಯ ಇಂದಿನ ಯುಗಧರ್ಮ. ನಮ್ಮ ರಾಷ್ಟ್ರಮಾತ್ರವಲ್ಲ ಇಡೀ ಜಗತ್ತು ಆ ಧ್ಯೇಯದ ಕಡೆಗೆ ಸಾಗುತ್ತಿದೆ. ಇಂಥ ಸರ್ವೋದಯದ ಕಲ್ಪನೆಯನ್ನು ಕುವೆಂಪು ಶ್ಮಶಾನ ಕುರುಕ್ಷೇತ್ರದ ಕಡೆಯಲ್ಲಿ ಚಿತ್ರಿಸಿದ್ದಾರೆ.

*ಸಾರ್ವಭೌಮತ್ವ ಭಂಗಂ ...........*
*ಸ್ವತಂತ್ರ ಭಾರತಂಗಂ ......... ಸರ್ವಪ್ರಜಾಧಿಪತ್ಯಂ*
*ಸರ್ವ ಸಮತ್ವಂ ............ ಜಗತ್ ಕಲ್ಯಾಣಂ*
*ಭೂವೈಕುಂಠಂ ........... ನೋಡದೋ .........*[21]

ಕುವೆಂಪು ಅವರು ಈ ನಾಟಕವನ್ನು ಬರೆಯುವ ಕಾಲದಲ್ಲಿ ಭಾರತ ಸ್ವಾತಂತ್ರ್ಯಗೊಂಡಿರಲಿಲ್ಲ. ಆದರೆ ಅವರ ಪೂರ್ಣ ದೃಷ್ಟಿಗೆ ಭಾರತ ಸ್ವಾತಂತ್ರ್ಯಗೊಳ್ಳುವುದು ಸಂವೇದ್ಯವಾಗಿದೆ. ಕುವೆಂಪು ಅವರು ದೇಶಕ್ಕೆ

ಅನ್ನ ನೀಡುವ ರೈತನನ್ನು ನೇಗಿಲಯೋಗಿ ಎಂದು ಕರೆದಿರುವುದು, ಶೂದ್ರ ಸಂಸ್ಕೃತಿಯಲ್ಲಿ ಪ್ರಮುಖ ವಸ್ತುವಾದ ಗೊಬ್ಬರದ ಬಗ್ಗೆ ಬರೆದುದೇ ಒಂದು ದೊಡ್ಡ ದರ್ಶನವಾಗಿದೆ.

ಕುವೆಂಪು ಅವರ ದರ್ಶನ ಮತ್ತು ಮಾನವೀಯ ಪರವಾದ ಕಾಳಜಿ ಹಾಗೂ ವೈಚಾರಿಕತೆ ಅವರ ಎಲ್ಲ ಪ್ರಕಾರದ ಕೃತಿಗಳಲ್ಲಿಯು ಮೈದಾಳಿದೆ. ಹಾಗಾಗಿಯೆ ದ.ರಾ.ಬೇಂದ್ರೆ ಅವರು ಕುವೆಂಪು ಅವರನ್ನು 'ಯುಗದ ಕವಿ ಜಗದ ಕವಿ' ಎಂಬುದಾಗಿ ಕರೆದಿದ್ದಾರೆ.

### ಅಡಿಟಿಪ್ಪಣಿಗಳು

೧. ಕುವೆಂಪು, 'ಮುಂದಿನ ಸಾಹಿತ್ಯದಲ್ಲಿ ಸಮನ್ವಯ, ಸರ್ವೋದಯ ಮತ್ತು ಪೂರ್ಣದೃಷ್ಟಿ'. *ಶತಮಾನದ ಸಾಹಿತ್ಯ ವಿಮರ್ಶೆ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧, ಪು. ೧೫೬.

೨. ಕೆ.ಪಿ. ಪೂರ್ಣಚಂದ್ರ ತೇಜಸ್ವಿ, *ಅಣ್ಣನ ನೆನಪುಗಳು*, ಪುಸ್ತಕ ಪ್ರಕಾಶನ, ಮೈಸೂರು, ೨೦೦೭, ಪು. ೨.

೩. ಸಿ.ಪಿ.ಕೆ., *ಕುವೆಂಪು ಸಾಹಿತ್ಯ ಲೋಕ*, ಚೇತನಬುಕ್ ಹೌಸ್, ಮೈಸೂರು, ಪು. ೪೫.

೪. ಡಾ. ಪ್ರಭುಶಂಕರ, 'ಕುವೆಂಪು' *ಸಾಲುದೀಪಗಳು*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧, ಪು.೨೨೮.

೫. ಆರ್ವಿಯಸ್ ಸುಂದರಂ, 'ಶ್ರೀ ರಾಮಾಯಣದರ್ಶನಂ ಮತ್ತು ಶ್ರೀರಾಮಾಯಣ ಕಲ್ಪವೃಷಮು', *ಸಹ್ಯಾದ್ರಿ*, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೭೫, ಪು. ೩೭೬.

೬. ಕುವೆಂಪು, *ಶ್ರೀ ರಾಮಾಯಣದರ್ಶನಂ*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೬.

೭. ಡಿ.ಎಸ್. ನಾಗಭೂಷಣ, 'ಕುವೆಂಪು ಅವರ ಕಥನ ಪ್ರತಿಭೆಯ ದಾರ್ಶನಿಕ ನೆಲೆಗಳು' *ಕುವೆಂಪು ಒಂದು ಪುನರ್ನ್ವೇಷಣೆ* ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೫, ಪು. ೧೧೧.

೮. ಡಾ. ಜಿ.ಎಸ್. ಶಿವರುದ್ರಪ್ಪ, 'ಕುವೆಂಪು ಒಂದು ಯುಗ ನಿರ್ಮಾಪಕ ಸತ್ವ' ಸುಧಾವಾರ ಪತ್ರಿಕೆ, ೧೯೯೪, ಪು. ೨೯.

೯. ಕುವೆಂಪು, ಬಾ ಫಾಲ್ಗುಣ ರವಿ ದರ್ಶನಕೆ, *ಕುವೆಂಪು ಸಮಗ್ರ ಕಾವ್ಯ*, ಸಂಪುಟ ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು. ೬೪೯.

೧೦. ದೇಜಗೌ, *ಕುವೆಂಪು ದರ್ಶನ*, ಸಂಪುಟ ೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ-ಹಂಪಿ, ೨೦೦೬, ಪು. ೪೭೭.

೧೧. ಕುವೆಂಪು, ಕೂಸಿನ ಕನಸು, *ಕುವೆಂಪು ಸಮಗ್ರ ಕಾವ್ಯ*, ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು. ೩೯೯.

೧೨. ಅದೇ, ಕಲ್ಕಿ, ಪು. ೧೬೭

೧೩. ಅದೇ, ಇಂದಿನ ದೇವರು, ಪು. ೧೪೪.

೧೪. ಡಿ.ಎಸ್. ನಾಗಭೂಷಣ, *ಕುವೆಂಪು ಒಂದು ಪುನರನ್ವೇಷಣೆ* ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೫, ಪು. ೨೭೨.

೧೫. ಕುವೆಂಪು, *ಮಲೆಗಳಲ್ಲಿ ಮದುಮಗಳು*, ಉದಯರವಿ ಪ್ರಕಾಶನ, ಮೈಸೂರು, ೧೯೯೨.

೧೬. ಕುವೆಂಪು, *ಜಲಗಾರ ನಾಟಕ*, ಉದಯರವಿ ಪ್ರಕಾಶನ, ಮೈಸೂರು, ೧೯೮೪, ಪು. ೧೨.

೧೭. ಅದೇ, ಪು. ೩೪.

೧೮. ಕುವೆಂಪು, *ಬೆರಳ್‌ಗೆ ಕೊರಳ್ ನಾಟಕ*, ಉದಯ ರವಿ ಪ್ರಕಾಶನ, ಮೈಸೂರು ೧೯೯೧, ಪು. ೧೪.

೧೯. ಅದೇ, ಪು. ೬೪.

೨೦. ಕುವೆಂಪು, *ಶ್ಮಶಾನ ಕುರುಕ್ಷೇತ್ರಂ ನಾಟಕ*, ಉದಯರವಿ ಪ್ರಕಾಶನ, ಮೈಸೂರು, ೧೯೬೨, ಪು. ೩

೨೧. ಅದೇ, ಪು. ೪೭.

ನವೋದಯ ಸಾಹಿತ್ಯದ ಉಗಮಕ್ಕೆ ಹಲವಾರು ಪ್ರಭಾವಗಳಿವೆ. ಮುಖ್ಯವಾಗಿ ಇಂಗ್ಲೀಷ್ ಸಾಹಿತ್ಯದ ಪ್ರಭಾವ, ಪ್ರೇರಣೆ ವಿಶೇಷವಾಗಿ ಬಿ.ಎಂ.ಶ್ರೀಯವರ ಕೊಡುಗೆ ನವೋದಯ ಸಾಹಿತ್ಯದ ಹುಟ್ಟಿಗೆ ಪ್ರಮುಖ ಕಾರಣವಾಗಿದೆ. ಹಾಗಾಗಿಯೆ ಬಿ.ಎಂ.ಶ್ರೀಯವರನ್ನು ನವೋದಯದ ಆಚಾರ್ಯರು ಎಂಬುದಾಗಿ ಕರೆಯಲಾಗಿದೆ. ಜಡ್ಡುಗಟ್ಟಿ ಹೋಗಿದ್ದ ಕನ್ನಡ ಸಾಹಿತ್ಯಕ್ಕೆ ಅವರು ಹೊಸ ಚೈತನ್ಯವನ್ನು ನೀಡಿದ್ದಾರೆ. ನವೋದಯ ಸಾಹಿತ್ಯದ ಉಗಮದೊಂದಿಗೆ ವೈವಿಧ್ಯಮಯವಾದ ಸಾಹಿತ್ಯ ಚರಿತ್ರೆಯಲ್ಲಿ ಇಪ್ಪತ್ತನೆಯ ಶತಮಾನ ಒಂದು ಮಹತ್ವದ ಕಾಲಘಟ್ಟ. ಅತ್ಯಂತ ವೈವಿಧ್ಯಪೂರ್ಣವೂ, ವ್ಯಾಪಕವೂ ಆದ ಸಾಹಿತ್ಯ ಸೃಷ್ಟಿ ನಡೆದಿದ್ದು ಈ ಕಾಲಘಟ್ಟದಲ್ಲಿಯೇ. ಕನ್ನಡದ ಅದೃಷ್ಟವೆನ್ನುವಂತೆ ಮಾಸ್ತಿ, ಬೇಂದ್ರೆ, ಕಾರಂತ, ಕುವೆಂಪು ಈ ದೈತ್ಯಪ್ರತಿಭೆಯ ಮಹಾನುಭಾವರು ಮೂಡಿಬಂದ ಕಾಲವೂ ಇದಾಗಿದೆ. ಅದರಲ್ಲಿಯೂ ವಿಶೇಷವಾಗಿ ಈ ಮಹಾನಿಯರೆಲ್ಲ ನವೋದಯ ಕಾಲಘಟ್ಟದಲ್ಲಿದ್ದು ಅತ್ಯಂತ ಮಹತ್ವಪೂರ್ಣವಾಗಿದೆ.

ನವೋದಯ ಸಾಹಿತ್ಯರಚನೆ ಇಪ್ಪತ್ತನೆಯ ಶತಮಾನದ ಮೊದಲಭಾಗದಲ್ಲಿ ರಚನೆಯಾದದ್ದಾಗಿದೆ. ಆ ಕಾಲಘಟ್ಟದ ಚಾರಿತ್ರಿಕ ಹಾಗು ಸಾಂಸ್ಕೃತಿಕ ಒತ್ತಡಗಳನ್ನು ಪ್ರತಿನಿಧಿಸುತ್ತಾ ಸೃಷ್ಟಿಯಾದ ಕಥಾಸಾಹಿತ್ಯ ಅದರ ಒಂದು ಭಾಗವಾಗಿದೆ. ನವೋದಯ ಕಥಾಸಾಹಿತ್ಯದ ಪ್ರಧಾನ ಗುಣವೆಂದರೆ ಮಾನವೀಯತೆ ಮತ್ತು ಔದಾರ್ಯದ ದೃಷ್ಟಿ. ಬದುಕಿನ ಬಗೆಗಿನ ವಿಸ್ಮಯ, ದುಗುಡ ಹಾಗು ಕನ್ನಡ ಸಾರಸ್ವತ ಲೋಕದ ಸಾಂಸ್ಕೃತಿಕ ಮೌಲ್ಯಗಳ ಕೇಂದ್ರೀಕರಣ ಮುಖ್ಯವಾಗಿತ್ತು. ಹಾಗಾಗಿ ಕಥೆಗಾರರಾದ ಮಾಸ್ತಿಯವರ ಸಮಕಾಲೀನರಾಗಿ ಬಂದವರು ಕುವೆಂಪು. ಕುವೆಂಪು ಅವರು ಅದೇ ಕಾಲಘಟ್ಟದ ಕಾಲದ ಅತ್ಯುತ್ತಮ ಕಥೆಗಾರರು. ಅವರ ಕಥೆಗಳು ಹಾಗು ಕಾದಂಬರಿಗಳು ವಾಸ್ತವವಾದಿ ನೆಲೆಯಲ್ಲಿ ರೂಪು ಗೊಂಡಂತಹವುಗಳಾಗಿವೆ.

"ಆಧುನಿಕ ಕನ್ನಡ ಸಣ್ಣಕಥಾ ಸಾಹಿತ್ಯ ಕನ್ನಡದ ಪ್ರಾಚೀನ ಅಭಿಜಾತ ಕಥಾಪರಂಪರೆಯ ಪ್ರೇರಣೆ ಮತ್ತು ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಇವುಗಳಿಂದ ಸೃಷ್ಟಿಯಾದದ್ದು. ಪ್ರಾಚೀನ ಹಾಗು ಮೌಖಿಕ ಪರಂಪರೆಯ ಕೃತಿಗಳಲ್ಲಿ ಹರಿಯುತ್ತಿದ್ದ ಕಥನದ ನಿರೂಪಣೆ ಆಧುನಿಕ ಕನ್ನಡ ಸಾಹಿತ್ಯಕ್ಕೆ ಸಹಜವಾಗಿ ಒಲಿದು ಬಂದು ಹೊಸ ಸೃಷ್ಟಿಗೆ ಕಾರಣವಾಯಿತು. ನಂತರ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಣ್ಣಕಥೆ ಒಂದು ಪ್ರಮುಖ ಪ್ರಕಾರವಾಗಿ ತನ್ನ ವಸ್ತು, ರೂಪ, ತಂತ್ರ, ಭಾಷೆ, ಶೈಲಿ, ಸಂವೇದನೆಯಲ್ಲಿ ಹೊಸ ಬದಲಾವಣೆಯನ್ನು ತಂದುಕೊಂಡಿತು. ಆಧುನಿಕ ಕನ್ನಡ ಸಣ್ಣಕಥಾಸಾಹಿತ್ಯವನ್ನು ಪ್ರಮುಖವಾಗಿ ಮೂರು ಅಥವಾ ನಾಲ್ಕು ಘಟ್ಟಗಳಲ್ಲಿ ವಿಶ್ಲೇಷಿಸಬಹುದು. ಮೊದಲನೆಯ ಘಟ್ಟ ೧೯೦೦ ರಿಂದ ೧೯೫೦. ಎರಡನೆಯ ಘಟ್ಟ ೧೯೫೧ ರಿಂದ ೧೯೭೦. ಮೂರನೆಯದು ೧೯೭೧ ರ ನಂತರದ ಘಟ್ಟವನ್ನು ನವ್ಯೋತ್ತರ ಎಂದು ಹೇಳಬಹುದು. ಆದರೆ ಇದು ನಿರ್ದಿಷ್ಟವಾದ ವಿಂಗಡಣೆಯಲ್ಲ. ನವೋದಯ ಘಟ್ಟದ ಸಂದರ್ಭದಲ್ಲಿಯೆ ಪ್ರಗತಿಶೀಲ ಕಥಾಸಾಹಿತ್ಯದ ಘಟ್ಟವೂ ಬರುತ್ತದೆ. ಒಂದು ಘಟ್ಟದ ಕಥಾಸಾಹಿತ್ಯದ ಸಂವೇದನೆ ಮತ್ತೊಂದು ಘಟ್ಟದ ಕಥಾಸಾಹಿತ್ಯದ ಸಂವೇದನೆಯನ್ನು ಪ್ರಭಾವಿಸಿರುವುದುಂಟು. ಒಂದು ಘಟ್ಟದಲ್ಲಿ ಕಥೆಗಳನ್ನು ಬರೆಯಲು ಆರಂಭಿಸಿದ ಕಥೆಗಾರರು ಚಾರಿತ್ರಿಕ ಹಾಗು ಸಾಮಾಜಿಕ ಬದಲಾವಣೆಯ ಸಂದರ್ಭದಲ್ಲಿ ತಮ್ಮ

ಮನೋಧರ್ಮದಲ್ಲಿ ಬದಲಾವಣೆಯನ್ನು ತಂದುಕೊಂಡಿರುವುದುಂಟು"[೧] ಎಂಬುದಾಗಿ ಡಾ. ಕರೀಗೌಡ ಬೀಚನಹಳ್ಳಿಯವರು ತಿಳಿಸಿದ್ದಾರೆ.

ನವೋದಯ ಕಾಲಘಟ್ಟದ ಸಂದರ್ಭದಲ್ಲಿಯೆ ಪ್ರಗತಿಶೀಲ ಕಥಾಸಾಹಿತ್ಯವು ಬರುತ್ತದೆ. ಪ್ರಗತಿಶೀಲ ಚಳುವಳಿಯಿಂದ ನಮ್ಮ ಸಾಹಿತ್ಯದ ಮೇಲೆ ಗಣನೀಯವಾದ ಪರಿಣಾಮವಾಗಿದೆ. ಪ್ರಗತಿಶೀಲ ಸಾಹಿತ್ಯ ವಸ್ತು, ನಿರೂಪಣೆ, ಶೈಲಿ, ಎಲ್ಲದರಲ್ಲಿ ಹೊಸ ಜಾಡನ್ನು ಹಿಡಿಯಿತು. ಬಡವರ, ಶ್ರಮಜೀವಿಗಳ ಬಗೆಗೆ ಸಹಾನುಭೂತಿ, ಶೋಷಣೆಗೆ ವಿರೋಧ, ಸಾಮಾಜಿಕ ವೈಷಮ್ಯಗಳ ಬಗೆಗೆ ಅಸಮಾಧಾನ ಇವು ಪ್ರಗತಿಶೀಲ ಸಾಹಿತ್ಯದ ಮುಖ್ಯ ನಿಲುವುಗಳು. ಪ್ರಗತಿಶೀಲ ಸಾಹಿತ್ಯದಲ್ಲಿ ವಾಸ್ತವಿಕತೆಗೆ ಹೆಚ್ಚಿನ ಮಹತ್ವ ದೊರೆಯಿತು.

ನವೋದಯ ಸಾಹಿತ್ಯರಚನೆ ಸ್ವಾತಂತ್ರ್ಯಪೂರ್ವದ ಕಾಲಘಟ್ಟದಲ್ಲಿಯೆ ಆಗಿದೆ. ನವೋದಯ ಸಾಹಿತ್ಯ ಮುಖ್ಯವಾಗಿ ಪ್ರಕೃತಿ ಸೌಂದರ್ಯ, ರಾಷ್ಟ್ರಪ್ರೇಮ ಆದರ್ಶಜೀವನ, ಭಾವನಾತ್ಮಕ ಸಂಬಂಧದ ಧೋರಣೆಗಳನ್ನು ಒಳಗೊಂಡಿದೆ. ಈ ಕಾಲದಲ್ಲಿ ಕಥಾಸಾಹಿತ್ಯ ಮುಖ್ಯವಾಗಿ ಮಾನವ ಮತ್ತು ಸಮಾಜ ಕೇಂದ್ರಿತವಾದದ್ದು. ನವೋದಯ ಕಥಾಸಾಹಿತ್ಯದ ಪ್ರಧಾನ ಗುಣವೆಂದರೆ ಮಾನವೀಯತೆ ಮತ್ತು ಔದಾರ್ಯ. ಈ ಎಲ್ಲದರ ಸಂಬಂಧಗಳ ವಾಸ್ತವ ವಿಶ್ಲೇಷಣೆ, ಆದರ್ಶ ಮಾನವ ವ್ಯಕ್ತಿತ್ವದ ನಿರ್ಮಾಣ ಮತ್ತು ಮಾನವ ಸ್ವಭಾವದ ಮಜಲುಗಳ ಶೋಧನೆಯೇ ನವೋದಯ ಕಾಲಘಟ್ಟದ ಕಥಾಸಾಹಿತ್ಯದ ಮುಖ್ಯ ಕಾಳಜಿಯಾಗಿದೆ.

"ನವೋದಯ ಕಾಲಘಟ್ಟ ಮುಖ್ಯವಾಗಿ ನಮ್ಮ ದೇಶಕ್ಕೆ ಸ್ವಾತಂತ್ರ್ಯವನ್ನು ಪಡೆಯುವ ಕಾಲವಾಗಿತ್ತು. ಈ ಅವಧಿಯಲ್ಲಿ ಬರೆದ ಯಾರೇ ಲೇಖಕರಾಗಲೀ ಅವರು ರಾಷ್ಟ್ರೀಯ ಭಾವನೆಯಿಂದ ಅನ್ಯರಾಗಿ ಉಳಿಯುವುದು ಅಸಾಧ್ಯವಾಗಿತ್ತು. ಆಗ ರಾಷ್ಟ್ರನಾಯಕರಾದವರು ಸಹ ಕೇವಲ ರಾಜಕೀಯ ಅಧಿಕಾರವನ್ನೇ ತಮ್ಮ ಪ್ರೇರಣೆಯಾಗಿ ಹೊಂದಿರಲಿಲ್ಲ. ಗಾಂಧೀಜಿ, ತಿಲಕ್, ಅರವಿಂದ, ವಿನೋಬಾ ಭಾವೆ ಮುಂತಾದವರು ತಂತಮ್ಮ ಸ್ಫೂರ್ತಿಯನ್ನು 'ಭಗವದ್ಗೀತೆ'ಯಿಂದ ಸಹ ಪಡೆಯುತ್ತಿದ್ದದ್ದು ಒಂದು ಚಾರಿತ್ರಿಕ ಸತ್ಯ. ರಾಷ್ಟ್ರೀಯ ಚಳವಳಿಯಲ್ಲಿ ಪಾಲ್ಗೊಳ್ಳುವಿಕೆ, ಕನ್ನಡನಾಡು ನುಡಿ ಬಗ್ಗೆ ಎಚ್ಚರ, ಸಮಾಜದ ಅರ್ಥಹೀನ ರೀತಿನೀತಿಗಳ ಬಗ್ಗೆ ಪುನರ್ ವ್ಯಾಖ್ಯಾನ ಇವು ಈ ಅವಧಿಯ ಕನ್ನಡ ಕಥಾಸಾಹಿತ್ಯದಲ್ಲಿ ದಟ್ಟವಾಗಿ ಕಾಣಿಸಿಕೊಂಡಿದ್ದವು. ಈ ಘಟ್ಟದ ಲೇಖಕರ ಮುಂದೆ ರಾಷ್ಟ್ರದ ಬಂಧ ವಿಮೋಚನೆ ನಾಡಿನ ಏಕೀಕರಣ, ಸಾಂಸ್ಕೃತಿಕ ಪುನರುಜ್ಜೀವನ, ಜಾತಿಪದ್ಧತಿ, ಸ್ತ್ರೀ ವಿದ್ಯಾಭ್ಯಾಸ, ಸಾಮಾಜಿಕ ಅಸಮಾನತೆ, ಇಂಗ್ಲೀಷ್ ಶಿಕ್ಷಣ ಮುಂತಾದ ಸಮಸ್ಯೆಗಳು ಇದಿರಾಗಿದ್ದವು. ಇವುಗಳ ವಿರುದ್ಧ ಈ ಲೇಖಕರು ಈಜಿ ಸಾಮಾಜಿಕ ಪರಿವರ್ತನೆ, ಜಾತ್ಯತೀತ ಸಮಾಜ ನಿರ್ಮಾಣ, ಆರ್ಥಿಕ ಅಸಮಾನತೆಯನ್ನು ಹೋಗಲಾಡಿಸಿ ಸಮಾನತೆಯನ್ನು ತರುವುದರ ಬಗ್ಗೆ ತಮ್ಮ ಬರವಣಿಗೆಯಲ್ಲಿ ಅನ್ವೇಷಿಸಬೇಕಾಗಿತ್ತು. ಗಾಂಧೀಜಿ, ಅರವಿಂದ, ವಿವೇಕಾನಂದ, ಡಾರ್ವಿನ್, ನ್ಯೂಟನ್, ತತ್ವಶಾಸ್ತ್ರ, ಸಾಹಿತ್ಯ ಮತ್ತು ಮಾನವತಾವಾದದ ಪ್ರಭಾವ ಇವೆಲ್ಲಾ ಈ ಘಟ್ಟದ ಕಥಾಸಾಹಿತ್ಯದ ಹಿಂದೆ ಇದ್ದ ಸ್ಫೂರ್ತಿಯ ತತ್ವಗಳಾಗಿದ್ದವು"[೨] ಎಂಬುದಾಗಿ ಡಾ. ಕರೀಗೌಡ ಬೀಚನಹಳ್ಳಿ ಅವರು ಅಭಿಪ್ರಾಯಪಟ್ಟಿದ್ದಾರೆ.

ನವೋದಯ ಕಾಲದ ಪ್ರಮುಖ ಕಥೆಗಾರರೆಂದರೆ ಪಂಜೆ ಮಂಗೇಶರಾಯ, ಮಾಸ್ತಿವೆಂಕಟೇಶ ಅಯ್ಯಂಗಾರ್, ಕಾರಂತ, ಕುವೆಂಪು, ಆನಂದ, ಆನಂದಕಂದ, ಎಂ.ವಿ. ಸೀತಾರಾಮಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎ.ಆರ್. ಕೃಷ್ಣಶಾಸ್ತ್ರಿ, ಸೇಡಿಯಾಪು ಕೃಷ್ಣಭಟ್ಟ, ಎಂ.ಎನ್. ಕಾಮತ್ ಮುಂತಾದವರು. ಮಾನವೀಯ ಸಂಬಂಧಗಳ ಶೋಧನೆ ಹಾಗು ಆದರ್ಶ ವ್ಯಕ್ತಿತ್ವ ನಿರ್ಮಾಣದ ಚಿತ್ರಣದಿಂದ ಇವರ ಕಥೆಗಳು ವಿಶಿಷ್ಟತೆಯಿಂದ ಕೂಡಿವೆ.

೧೯೦೦ ರಲ್ಲಿ ಪ್ರಕಟವಾದ ಪಂಜೆ ಮಂಗೇಶರಾಯರ 'ನನ್ನ ಚಿಕ್ಕಪ್ಪ', 'ಕಮಲಪುರದ ಹೋಟ್ಲಿನಲ್ಲಿ' ಮುಂತಾದ ಕಥೆಗಳು ನವೋದಯ ಕಥಾಸಾಹಿತ್ಯ ಅಲ್ಲ. ಆರಂಭದ ರಚನೆಗಳಾಗಿವೆ. ಇವರು ಮಂಗಳೂರು ಪ್ರಾಂತ್ಯದ ಕಡೆಗೆ ಹೊಸ ಹೊಸ ಪ್ರಯೋಗ ನಡೆಸಿದ ಹಿರಿಯ ಲೇಖಕರು. ಪಂಜೆಯವರ ಒಟ್ಟು ಹದಿಮೂರು ಕಥೆಗಳಲ್ಲಿ ಒಂಬತ್ತು ಸಾಮಾಜಿಕ, ನಾಲ್ಕು ಚಾರಿತ್ರಿಕ ಕಥೆಗಳಾಗಿವೆ. ಚಾರಿತ್ರಿಕ ಕಥೆಗಳಲ್ಲಿ ಆಧುನಿಕ ಸಣ್ಣಕಥೆಗಳ ಲಕ್ಷಣಗಳು ಅಷ್ಟಾಗಿ ಕಂಡುಬರುವುದಿಲ್ಲ. ಆದರೆ ಸಾಮಾಜಿಕ ಕಥೆಗಳಲ್ಲಿ ಬದುಕಿನ ವಿನೋದ ಒಡೆದು ಕಾಣುತ್ತದೆ. ಚಾರಿತ್ರಿಕ ಕಥೆಗಳಲ್ಲಿ ವೀರ ರಮಣಿಯರ ಪವಿತ್ರ ಪ್ರೇಮ, ಉಜ್ವಲ ಸಾಹಸಗಳ ಚಿತ್ರಣವಿದೆ. ರಮಣಿಯರ ಬದುಕು ದುರಂತ ಸಾವಿನಲ್ಲಿ ಮುಗಿಯುವುದನ್ನು ಕಾಣಬಹುದು. ಪಂಜೆಯವರ 'ಕಮಲಪುರದ ಹೋಟ್ಲಿನಲ್ಲಿ' ಮುಂತಾದ ಕಥೆಗಳಲ್ಲಿ ಹಾಸ್ಯ ಹೆಚ್ಚಾಗಿ ಮೂಡಿಬಂದಿರುವುದನ್ನು ಕಾಣಬಹುದು. ಇಪ್ಪತ್ತು ವರ್ಷಗಳ ಕೆಳಗೆ ಪೂರ್ಣಸಾಮಿ ಅಯ್ಯಂಗಾರರು ಒಂದು ಹೆಣ್ಣಿಗೋಸ್ಕರ ಊರು ಬಿಟ್ಟುಹೋಗಿ ಅನೇಕ ಯಾತ್ರಾಸ್ಥಳಗಳನ್ನು ಸುತ್ತಾಡಿ ಹಣಸಂಪಾದನೆ ಮಾಡಿ ಮರಳಿ ಕಮಲಪುರಕ್ಕೆ ಬಂದು ಹೊಟೆಲ್ಲನ್ನು ಸ್ಥಾಪಿಸಿ ಅಲ್ಲಿ ಅವರು ಎದುರಿಸುವ ಸ್ಥಳೀಯ ವ್ಯಕ್ತಿಗಳ ಸಂಬಂಧಗಳನ್ನು ಈ ಕಥೆ ಎಳೆ ಎಳೆಯಾಗಿ ಬಿಚ್ಚಿಡುತ್ತದೆ.

ಆಧುನಿಕ ಕನ್ನಡ ಸಣ್ಣಕಥಾ ಸಾಹಿತ್ಯದ ನಿರ್ಮಾಣಕ್ಕಾಗಿ ಉತ್ತರ ಕರ್ನಾಟಕದಲ್ಲಿ ಶ್ರಮಿಸಿದ ಆರಂಭಿಕ ಕಥೆಗಾರರಲ್ಲಿ ಕೆರೂರು ವಾಸುದೇವಾಚಾರ್ಯರು ಒಬ್ಬರು. ಕೆರೂರರ ಕಥೆಗಳು ಉತ್ತರ ಕರ್ನಾಟಕದ ದೇಶಿ ಶೈಲಿಯಲ್ಲಿ ರಚನೆಗೊಂಡಿವೆ. ಇವರ ಕಥಾಪ್ರಪಂಚ ಕಾಲ್ಪನಿಕ, ಐತಿಹಾಸಿಕ, ಚಾರಿತ್ರಿಕ, ಪತ್ತೆದಾರಿ ಹೀಗೆ ವಿವಿಧ ವರ್ಗದ ಕಥೆಗಳಿಂದ ಕೂಡಿದೆ. ಕೆರೂರರ ಕಥೆಗಳಲ್ಲಿ ಆ ಕಾಲದ ಸುಧಾರಣಾವಾದದ ಪ್ರಭಾವವು ದಟ್ಟವಾಗಿದೆ. ವಿಧವಾ ವಿವಾಹ, ಸ್ತ್ರೀ ಶಿಕ್ಷಣ, ಸ್ತ್ರೀ ಪುರುಷರ ಸಮಾನತೆ, ಪ್ರೇಮವಿವಾಹ ಮುಂತಾದ ವಿಷಯಗಳನ್ನು ಆಧುನಿಕತೆಯ ದೃಷ್ಟಿಯಿಂದ ರಚಿಸಿದ್ದಾರೆ. ಈ ದೃಷ್ಟಿಯಿಂದ ಇವರ 'ಮಲ್ಲೇಶಿಯ ನಲ್ಲೆಯರು' 'ತೊಳೆದ ಮುತ್ತು' ಕಥೆಗಳು ಗಮನಾರ್ಹವಾದ ರಚನೆಗಳಾಗಿವೆ. ಉತ್ತರ ಕರ್ನಾಟಕದ ವಿಶಿಷ್ಟವಾದ ನುಡಿಗಟ್ಟು, ಪಡೆನುಡಿ, ಗಾದೆಗಳನ್ನು ತಮ್ಮ ಕತೆಗಳಲ್ಲಿ ಪರಿಣಾಮಕಾರಿಯಾಗಿ ಬಳಸಿದ್ದಾರೆ. 'ತೊಳೆದ ಮುತ್ತು' ಕಥೆಯಲ್ಲಿ ಪಾಶ್ಚಾತ್ಯ ರೀತಿ ನೀತಿಗಳ ಅನುಕರಣೆಯನ್ನು ಪರಿಚಯಿಸಿದ್ದಾರೆ. ಇಲ್ಲಿ ಹಿರಿಯರ ಒತ್ತಾಯಕ್ಕೆ ಮದುವೆಯಾಗಿ ಹೆಂಡತಿಯ ಮುಖವನ್ನು ನೋಡಿ ಅವಳ ಬಗ್ಗೆ ತಿರಸ್ಕಾರ ಬೆಳಸಿಕೊಂಡು ಕೊನೆಗೆ ತಾನು ಒಲ್ಲದ ಹೆಂಡತಿಯಲ್ಲೇ ಅನಿರೀಕ್ಷಿತವಾಗಿ ಹೊಸ ಸೌಂದರ್ಯ ಕಾಣುವ ನೋಟವಿದೆ. ಹೀಗೆ ಈ ಕಥೆಯಲ್ಲಿ ಒಂದು ಕಾಲದ ಸಾಮಾಜಿಕ ಸಂಗತಿಗಳನ್ನು ತಿಳಿಸಲಾಗಿದೆ. ಸಂಪ್ರದಾಯದ ಬಿಗಿ, ಸ್ತ್ರೀಯ ಅಸಮಾನತೆ, ಹೆಣ್ಣುಮಕ್ಕಳ ವಿದ್ಯಾಭ್ಯಾಸದ ಸಮಸ್ಯೆ ಇಲ್ಲಿದೆ.

ನವೋದಯ ಕಾಲದ ಪ್ರಮುಖ ಕಥೆಗಾರರಲ್ಲಿ ಎಂ.ಎನ್. ಕಾಮತರು ಒಬ್ಬರಾಗಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯವರಾದ ಇವರ ಮನೆಯ ಭಾಷೆ ಕೊಂಕಣಿಯಾದರೂ ಕನ್ನಡದ ಬೆಳವಣಿಗೆಗಾಗಿ ಶ್ರಮಿಸಿದರು. ಕಾಂತರು ಇಂಗ್ಲೀಷ್ ಹಾಗು ಬಂಗಾಳಿಯಿಂದಲು ಕೆಲವು ಕಥೆಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಇವರ 'ಗೆದ್ದವರು ಯಾರು ?', 'ಅಂದಿನ ಆವೂರು', 'ಆ ಮಗು', 'ವೈದ್ಯರಾಜ ಧನ್ವಂತರಿ' ಇನ್ನು ಮುಂತಾದ ಕಥೆಗಳು ಪ್ರಮುಖವಾದವು. ಇವೆಲ್ಲಾ ಮಂಗಳೂರಿನ ಸುತ್ತಮುತ್ತ ಪರಿಸರವನ್ನು ಬಣ್ಣಿಸುತ್ತವೆ. 'ಅಂದಿನ ಆವೂರು' ಕಥೆ ಹಳ್ಳಿಗರ ಬದುಕನ್ನು ಬಣ್ಣಿಸುತ್ತದೆ. 'ಗೆದ್ದವರು ಯಾರು ?' ಕಥೆ ಹೆಣ್ಣಿನ ನೋವು, ಹಳ್ಳಿಗರ ಮೂಢನಂಬಿಕೆ, ಪ್ರೇತಗಳ ನಂಬಿಕೆ, ಅಜ್ಞಾನ ಹೀಗೆ ಇಡೀ ಗ್ರಾಮದ ಬದುಕನ್ನು ಹಿಡಿದಿಟ್ಟಿದೆ. ಹಾಸ್ಯಶೈಲಿಯಲ್ಲಿ ರಚನೆಯಾಗಿರುವ ಈ ಕತೆಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಬದುಕನ್ನು ತೆರದಿಡಲಾಗಿದೆ. ಮೌಢ್ಯ, ದಾರಿದ್ರ್ಯ ಮತ್ತು ಶೋಷಣೆ, ಸ್ವಾರ್ಥ ಈ ಎಲ್ಲ ಸಂಗತಿಗಳನ್ನು ಅವರ ಕಥೆಗಳು ಒಳಗೊಂಡಿವೆ.

ಪಂಜೆ, ಕೆರೂರರ ತಲೆಮಾರಿನ ಮತ್ತೊಬ್ಬ ಕಥೆಗಾರರು ಎಸ್.ಜಿ. ಶಾಸ್ತ್ರಿ ಅವರು. ಅವರ 'ಹಬ್ಬದ ಉಡುಗೊರೆ', 'ವಾರದ ಹುಡುಗ' ಮುಂತಾದ ಕಥೆಗಳು ಕನ್ನಡ ಸಣ್ಣಕಥೆಗಳಲ್ಲಿ ವಿಶಿಷ್ಟ ರಚನೆಗಳಾಗಿವೆ. ಇವರ ಕತೆಗಳಲ್ಲಿ ಸಾಂಸಾರಿಕ ಜೀವನದ ಬದುಕನ್ನು, ಸಾಮರಸ್ಯದ ಭಾವನೆಯಿಂದ ಕೂಡಿಸುವ ಸಂಗತಿಯು ಕಂಡು ಬರುತ್ತದೆ. ಇದಕ್ಕೆ 'ಹಬ್ಬದ ಉಡುಗೊರೆ' ಉತ್ತಮ ಪ್ರಾತಿನಿಧಿಕ ಕಥೆಯಾಗಿದೆ. ಇಲ್ಲಿ ಚಿತ್ರಿತವಾಗಿರುವುದು ಒಂದು ಸಾಂಸಾರಿಕ ಚಿತ್ರಣ. ತಂದೆ-ತಾಯಿ, ಮಗ-ಮಗಳು ಹೀಗೆ ನಾಲ್ಕು ಜನರ ಒಂದು ಚಿಕ್ಕ ಸಂಸಾರ ಅದು. ಸಂಸಾರದಲ್ಲಿ ಬಡತನ ಇದೆ. ಆದರೆ ಅದು ಅವರಿಗೆ ಸಮಸ್ಯೆಯೇ ಅಲ್ಲ ಎಂಬಂತೆ ಅದನ್ನು ಒಪ್ಪಿಕೊಂಡು ಬದುಕುವ ಪರಿಪಾಠ ಇದೆ. ಅವರು ತಂತಮ್ಮ ಪರಸ್ಪರ ಪ್ರೀತಿ ಪ್ರೇಮಗಳ, ಔದಾರ್ಯ ಹೃದಯವಂತಿಕೆಗಳಿಂದ ಅದನ್ನು ಮರೆಸಿಬಿಟ್ಟಿದ್ದಾರೆ. ತಾಯಿ ಮಗನ ನಡುವಿನ ಭಾವನಾತ್ಮಕವಾದ ಸಂಬಂಧ ಹಾಗು ತಾಯಿ ಮಗನ ಭವಿಷ್ಯದ ಬಗ್ಗೆ ಕಾಣುವ ಕನಸು, ಅವಳ ತ್ಯಾಗ ಈ ಸಂಗತಿಗಳು ಓದುಗರ ಮನವನ್ನು ತಟ್ಟುತ್ತವೆ. ತನ್ನ ಆಸೆಯನ್ನು ಅದಿಮಿಟ್ಟು ಮಗನ ವಿದ್ಯಾರ್ಜನೆಗಾಗಿ ಶ್ರಮಿಸುವ ಆ ಮಹಿಳೆಯ ಶಕ್ತಿಯನ್ನು ಕಥೆ ಎತ್ತಿಹಿಡಿಯುತ್ತದೆ.

ನವೋದಯ ಕಾಲಘಟ್ಟದ ಸಣ್ಣಕತೆಗಾರರ ಬಗೆಗೆ ಡಾ. ಕರೀಗೌಡ ಬೀಚನಹಳ್ಳಿಯವರು ತಮ್ಮ ವಿಚಾರವನ್ನು ತಿಳಿಸುತ್ತ "ಈ ತಲೆಮಾರಿನ ಪ್ರಮುಖರಲ್ಲಿಮತ್ತೊಬ್ಬರಾದ ಎ.ಆರ್. ಕೃಷ್ಣಶಾಸ್ತ್ರಿಗಳು ಕನ್ನಡದ ಪ್ರಸಿದ್ಧ ವಿದ್ವಾಂಸರು. ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕನ್ನಡ ನಾಡು, ನುಡಿ ಕಟ್ಟುವ ಕೆಲಸದಲ್ಲಿ ತೊಡಗಿದ ಆಚಾರ್ಯರಲ್ಲಿ ಒಬ್ಬರು. ಇವರ ಕಥೆಗಳು ಆರಂಭದಲ್ಲಿ ಅನೇಕ ಕಾವ್ಯನಾಮಗಳಿಂದ ಪ್ರಕಟವಾಗಿ ನಂತರ 'ಶ್ರೀಪತಿಯ ಕಥೆಗಳು' ಎಂಬ ಹೆಸರಿನಿಂದ ಕೃತಿ ರೂಪದಲ್ಲಿ ಹೊರಬಂದಿತು. ಇವರ ಕಥೆಗಳ ವಸ್ತು ಮತ್ತು ಶೈಲಿ ಎರಡೂ ಗಂಭೀರವಾದುವು. ಸಂಸ್ಕೃತ ಸಾಹಿತ್ಯದಂತೆ ಅಭಿಜಾತ ಪರಂಪರೆಗೆ ಸೇರಿದ ಮಾರ್ಗ ಇವರದು. ಇವರ ಕಥೆಗಳು ಬದುಕಿನ ಗಂಭೀರ ಸಮಸ್ಯೆಗಳನ್ನು ಗಹನವಾಗಿ ಒರೆಗೆ ಹಚ್ಚುತ್ತವೆ. ವಿರಸ, ಯಾತನೆ ಪ್ರಧಾನವಾಗಿ ಇವರ ಕತೆಗಳಲ್ಲಿ ಕಂಡು ಬರುತ್ತದೆ. ಇವರ ಕತೆಗಳಲ್ಲಿ ಹರಟೆಯ ಹಾಸ್ಯ ಅಲ್ಲಲ್ಲಿ ಮಿಂಚಿನಂತೆ ಹೊಳೆದರೂ ಪರಿಣಾಮದಲ್ಲಿ ಕುತೂಹಲವನ್ನು

ಕೆರಳಿಸುತ್ತದೆ. 'ಊಟದಲ್ಲಿ ಉಪಚಾರ', 'ಬಂಗಲಿಯವಾಸ', 'ಗುರುಗಳ ಮಹಿಮೆ' ಈ ದೃಷ್ಟಿಯಿಂದ ಗಮನಾರ್ಹವಾದ ಕಥೆಗಳು."[೩]

"ಉತ್ತರ ಕರ್ನಾಟಕದ ಹಳ್ಳಿಯ ಸಂಸ್ಕೃತಿ ಮತ್ತು ಐತಿಹ್ಯ ದಂತಕತೆಗಳಿಗೆ ಸಂಬಂಧಿಸಿದಂತೆ ಕಥೆಗಳನ್ನು ಬರೆದವರಲ್ಲಿ ಬೆಟಗೇರಿ ಕೃಷ್ಣಶರ್ಮ ಅವರು ಮುಖ್ಯರು. ತಮ್ಮ ಕಥೆಗಳಲ್ಲಿ ಉತ್ತರ ಕರ್ನಾಟಕದ ಭಾಷೆಯನ್ನು ಬಳಸಿಕೊಳ್ಳುವುದರ ಮೂಲಕ ಪ್ರಾದೇಶಿಕ ವೈಶಿಷ್ಟ್ಯವನ್ನು ಮೆರೆದರು. ಇವರಿಗೆ ಕಥಾವಸ್ತುವಿಗಿಂತ ಹೆಚ್ಚಾಗಿ ಗ್ರಾಮೀಣರು ಬದುಕುವ ಕ್ರಮವೇ ಹೆಚ್ಚು ಮಹತ್ವದ್ದೆಂದು ಕಾಣಿಸುತ್ತದೆ"[೪]. "ಆನಂದಕಂದರ ಇನ್ನೊಂದು ಮಹತ್ವದ ಗುಣವೆಂದರೆ ಭಾವನಾವಶತೆಯ ಸೋಂಕು ತಗುಲದ ಇವರ ವಾಸ್ತವದೃಷ್ಟಿ"[೫] ಎಂದು ಕೀರ್ತಿನಾಥ ಕುರ್ತುಕೋಟಿ ಅವರು ಅಭಿಪ್ರಾಯಪಟ್ಟಿದ್ದಾರೆ. ಬೆಟಗೇರಿ ಕೃಷ್ಣಶರ್ಮ ಇವರ 'ಮಾತನಾಡುವ ಕಲ್ಲು', 'ಬಡತನದ ಬಾಳು', 'ಸೀಮೆಯಕಲ್ಲು', 'ಜೋಗತಿ ಕಲ್ಲು' ಮುಂತಾದ ಕಥೆಗಳು ಪ್ರಧಾನವಾಗಿ ಸಾಮಾಜಿಕ ಪ್ರತಿಕ್ರಿಯೆಯನ್ನು ಪ್ರಕಟಿಸುತ್ತವೆ. ಕಳೆದುಹೋದ ಸಂಸ್ಕೃತಿಗೆ ಸಂಬಂಧಿಸಿದ್ದ. ತ್ಯಾಗ, ಬಲಿದಾನ, ವೀರಜೀವನಗಳ ವಸ್ತುಗಳನ್ನು ತಮ್ಮ ಕಥೆಗಳಿಗೆ ವಸ್ತುಮಾಡಿಕೊಳ್ಳುವುದರ ಮೂಲಕ ಜನಪದರ ಜೀವನವನ್ನು ಸ್ವಾರಸ್ಯಕರವಾಗಿ ಚಿತ್ರಿಸಿದ್ದಾರೆ. ಪೇಶ್ವೆಯ ಆಡಳಿತದಲ್ಲಿ ಹೀನಕುಲದಲ್ಲಿ ಹುಟ್ಟಿದವಳಾದರೂ ಒಂದು ಮನೆತನವನ್ನು ನಿಲ್ಲಿಸಲು ತಾನೇ ವೀರತ್ವದಿಂದ ಬಲಿದಾನಕ್ಕೆ ಅರ್ಪಿಸಿಕೊಳ್ಳುವ ಮಹಿಳೆಯ ಚಿತ್ರ ಅವರ ಜೋಗತಿಕಲ್ಲು ಕತೆಯಲ್ಲಿ ಬರುತ್ತದೆ.

"ಆನಂದಕಂದರ ಜೊತೆಯಲ್ಲಿಯೇ ಕಥೆಗಳನ್ನು ಬರೆಯಲು ಶುರುಮಾಡಿದವರಲ್ಲಿ ಕೃಷ್ಣಕುಮಾರ ಕಲ್ಲೂರ ಒಬ್ಬರು. ವಾಸ್ತವವಾದವೇ ಪ್ರಧಾನವಾಗಿದ್ದ ನವೋದಯದ ಕಾಲದ ಕಥೆಗಳಲ್ಲಿ ಸಾಂಕೇತಿಕತೆಯನ್ನು ತಂದ ಶ್ರೇಯಸ್ಸಿಗೆ ಇವರು ಪಾತ್ರರಾಗಿದ್ದಾರೆ. ಕಥೆಯ ಭಾವವನ್ನು ಅತ್ಯಂತ ನವುರಾಗಿ, ಸೂಕ್ಷ್ಮವಾಗಿ ಕಲಾವಂತಿಕೆಯಿಂದ ಚಿತ್ರಿಸುತ್ತಾರೆ.[೬] ಬದುಕು ಮತ್ತು ಸಾವುಗಳ ನಡುವೆ ಸಂಘಟಿಸುವ ದುರಂತವನ್ನು ಗುಬ್ಬಿಗಳ ಸಂಸಾರ ಕಥೆ ಸಾರ್ಥಕವಾಗಿ ನಿರೂಪಿಸುತ್ತದೆ" ಕನ್ನಡ ಸಣ್ಣಕಥೆಯಲ್ಲಿ ವಿಶಿಷ್ಟವಾದ ವಸ್ತುಧ್ವನಿಯನ್ನು ರೂಪಿಸಿದವರಲ್ಲಿ ಬಾಗಲೋಡಿ ದೇವರಾಯ ಒಬ್ಬರು. ಇವರ ಕಥೆಗಳನ್ನೆಲ್ಲಾ ಒಟ್ಟಾಗಿ ನೋಡಿದಾಗ ವಸ್ತು, ನಿರೂಪಣೆ, ಜೀವನದೃಷ್ಟಿಗಳಲ್ಲಿ ಅಪರೂಪದ ವೈಶಿಷ್ಟ್ಯತೆ ಕಂಡುಬರುತ್ತದೆ.

ನವೋದಯದ ಪ್ರಸಿದ್ಧ ಬರಹಗಾರರಾದ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ತಮ್ಮ ಕಥೆಗಳಲ್ಲಿ ಆರಿಸಿಕೊಂಡ ವಸ್ತು ಗ್ರಾಮ ಪರಿಸರದ್ದು. ಬದುಕಿನ ಸೂಕ್ಷ್ಮ ಸಂವೇದನೆಗಳನ್ನು ಗಾದೆ, ಪಡೆನುಡಿ, ನುಡಿಗಟ್ಟು, ಜನಪದ ಭಾಷೆ ಮೂಲಕ ವ್ಯಕ್ತಪಡಿಸಿದರು. ಇವರ ನವಿರಾದ ಹಾಸ್ಯ ಶೈಲಿಯ ಬರವಣಿಗೆ ಓದುಗರಲ್ಲಿ ನಗುವನ್ನು ಸಹಜವಾಗಿ ಉಂಟುಮಾಡುತ್ತದೆ. ಹಲವಾರು ಕಥೆಗಳು ಜಾನಪದ ಜೀವನದ ಹಿನ್ನೆಲೆಯಿಂದ ಬಂದಂಥವು. ಅವರ ಕಥೆಗಳ ವಸ್ತು ವಾಸ್ತವಿಕ ಸಂಗತಿಯನ್ನು ಒಳಗೊಂಡಿವೆ. ಬಯಲು ಸೀಮೆಯ ಬದುಕನ್ನು ತಮ್ಮ ಕಥೆಗಳಲ್ಲಿ ಚಿತ್ರಿಸಿದವರಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮುಖ್ಯರು. ಇವರ ಕಥೆಗಳು ಸಾಂಸ್ಕೃತಿಕವಾಗಿ ಮಹತ್ವ ಪಡೆದಿವೆ. ವಾಸ್ತವಿಕತೆ ಹಾಗು ವಿನೋದದ ಸಂಗತಿಗಳನ್ನು ಕಥೆಗಳಲ್ಲಿ ಕಾಣುತ್ತೇವೆ. 'ಗರುಡಗಂಬದ ದಾಸಯ್ಯ' 'ಬೆಸ್ತರ ಕರಿಯ', 'ಶಿವರಾತ್ರಿ', 'ಹಳ್ಳಿಯ ಚಿತ್ರ', 'ಕೋರ್ಟಿನಲ್ಲಿ ಗೆದ್ದ ಎತ್ತು', 'ಕಮ್ಮಾರ ವೀರಭದ್ರಾಚಾರಿ ಜೋಯಿಸನಾದದು'. ಇನ್ನು ಮುಂತಾದ ಕಥೆಗಳು

ಹಾಸ್ಯಪ್ರತಿಭೆ, ಸಾಮರಸ್ಯಕ್ಕೆ ಸಂಬಂಧಿಸಿವೆ. "ಗೊರೂರು ಜೀವನದ ಸರಳ ಸೌಂದರ್ಯವನ್ನು ಭಾವನೆಯ ಹನಿಗಣ್ಣಿನಿಂದ ನೋಡಿ, ತದ್ರೂಪವಾಗಿ ಮೂಡಿಸುವ ಕುಶಲ ಕಲೆಗಾರಿಕೆ ಅವರದಾಗಿದೆ. ಆದ್ದರಿಂದ ಓದುವುದು ಕತೆಯೋ, ಹರಟೆಯೋ ಎಂಬ ವಿಚಾರ ಕೂಡ ಮನಸ್ಸಿಗೆ ಬರುವುದಿಲ್ಲ. ಇನ್ನು ವೈಚಾರಿಕತೆಯನ್ನಾಗಲಿ, ಕಲ್ಪನಾಶಕ್ತಿಯನ್ನಾಗಲಿ ಅವರಿಂದ ಆಪೇಕ್ಷಿಸಲಾಗದು. ವಾಸ್ತವತೆಯ ಒಂದು ಕಾರ್ಯವಾದ ಜೀವನ-ಚಿತ್ರಣದಲ್ಲಿ ಅವರು ಯಶಸ್ಸನ್ನು ಪಡೆದಿದ್ದಾರೆ"[೬]

ನವೋದಯ ತಲೆಮಾರಿನ ಕಥೆಗಾರರಲ್ಲಿ ಹೆಚ್ಚು ಜನಪ್ರಿಯ ಮತ್ತು ಪ್ರಖ್ಯಾತಿಯನ್ನು ಪಡೆದ ಕತೆಗಾರರಲ್ಲಿ ಆನಂದ (ಅಜ್ಜಂಪುರ ಸೀತಾರಾಮ) ಒಬ್ಬರು. ನವೋದಯ ಕಾಲದಲ್ಲಿ ದಾಂಪತ್ಯ ಜೀವನ ಕುರಿತು ಬರೆದ ಕಥೆಗಳು ಸಾಕಷ್ಟಿವೆ. ಹಾಗೆಯೇ ಆನಂದರ ಬಹುಪಾಲು ಕಥೆಗಳ ಚೌಕಟ್ಟು ಕೌಟುಂಬಿಕ ಪರಿಸರವೇ ಆಗಿದೆ. ಅವರ 'ರಾಧೆಯ ಕ್ಷಮೆ' ಒಂದು ಸರಸ ಸಲ್ಲಾಪದ ದಾಂಪತ್ಯ ಪ್ರಣಯದ ಕತೆಯಾದರೆ, 'ನಾನು ಕೊಂದ ಹುಡುಗ' ಅವರ ಗಂಭೀರ ಮನೋಧರ್ಮದ ಅಭಿವ್ಯಕ್ತಿಗೆ ಸಾಕ್ಷಿಯಾಗಿದೆ. ಗಂಡ ಹೆಂಡತಿ ಜಗಳ ಮತ್ತು ರಾಜಿ ಮನೋಭಾವದ ಎಳೆ 'ರಾಧೆಯ ಕ್ಷಮೆ'ಯಲ್ಲಿ ಕಂಡು ಬರುತ್ತದೆ. ಮಾಸ್ತಿಯವರ ಪ್ರಭಾವ ಆನಂದರ ಮೇಲೆ ಗಾಢವಾಗಿ ಆಗಿದೆ. ಹಾಗೆ ನೋಡಿದರೆ ನವೋದಯ ಕಾಲಘಟ್ಟದ ಹಲವಾರು ಲೇಖಕರ ಮೇಲೆ ಮಾಸ್ತಿಯವರ ಪ್ರಭಾವವಾಗಿದೆ ಎನ್ನಬಹುದು.

ಅಶ್ವತ್ಥರ ಕಥೆಗಳು ಗೊರೂರು ಚಿತ್ರಿಸಿದ ಶುದ್ಧ ಹಾಸ್ಯದ ಪರಂಪರೆಗೆ ಸೇರುತ್ತವೆ. ಅನ್ಯಾಯ, ಮೋಸ, ವಂಚನೆ, ಭ್ರಷ್ಟತೆ ಇವರ ಕಥೆಗಳ ವಸ್ತುವಾದರೂ ಅವುಗಳನ್ನು ವ್ಯಂಗ್ಯದ ಧಾಟಿಯಲ್ಲಿ ನಿರೂಪಿಸುತ್ತಾರೆ. ಇವರ 'ವ್ಯಭಿಚಾರ' ಕಥೆಯಲ್ಲಿ ಜಯಪುರದ ಬನಿಯ ಪಿಲಾನಿ ಮೋಸ ಮತ್ತು ಅನ್ಯಾಯದಿಂದ ಸಂಪಾದನೆ ಮಾಡಿದ ಹಣ ತನ್ನ ಕೈಸೇರದೆ ಅನ್ಯರ ಪಾಲಾದ ಬಗೆಯನ್ನು ಉತ್ತಮವಾಗಿ ನಿರೂಪಿಸಿದ್ದಾರೆ. ಹಣವನ್ನು ಅನ್ಯಾಯದ ಮಾರ್ಗದಲ್ಲಿ ಗಳಿಸಿದರೆ ಅದು ವ್ಯಭಿಚಾರಕ್ಕೆ ಸಮವಾಗುತ್ತದೆ ಎನ್ನುವ ಭಾವನೆ ವ್ಯಕ್ತವಾಗಿದೆ.

ನವೋದಯದ ಕಥಾಸ್ವರೂಪವನ್ನು ಸ್ವಾತಂತ್ರ್ಯಾನಂತರದ ಕಾಲದಲ್ಲೂ ಮುಂದುವರಿಸಿದವರಲ್ಲಿ ಜಿ.ಶಂ. ಪರಮಶಿವಯ್ಯ, ಸುಧಾಕರ ಅವರೂ ಬಹುಮುಖ್ಯರು. ಬಯಲುಸೀಮೆಯ ಚಿತ್ರಣ ಇವರ ಕಥೆಗಳಲ್ಲಿ ದಟ್ಟವಾಗಿ ಬರುತ್ತದೆ. ಜೀಶಂಪ ಅವರ 'ಕಾವಲುಗಾರ' ಮತ್ತು 'ಮಬ್ಬು ಜಾರಿದ ಕಣಿವೆಯಲ್ಲಿ' ಕಥೆಗಳು ಉತ್ತಮ ಕಥೆಗಳಾಗಿವೆ.

ಸುಧಾಕರ ಅವರು 'ಕಣ್ಣಿಕಿತ್ತ ಹಸು', 'ಜಲದ ಕಣ್ಣು', 'ಸಾಕಿದ ನಾಯಿ', 'ಕೋಡಿಬಿತ್ತು ಕೋಡಿ' ಮುಂತಾದ ಕಥೆಗಳಲ್ಲಿ ಗ್ರಾಮೀಣ ಬದುಕಿನ ರೀತಿ ರಿವಾಜುಗಳನ್ನು ಹಾಗು ತಾಕಲಾಟಗಳನ್ನು ಅತ್ಯಂತ ಸಮರ್ಥವಾಗಿ ಚಿತ್ರಿಸಿದ್ದಾರೆ. ವಾಸ್ತವ ಲೋಕದ ಜೀವನವನ್ನು ಹೇಳುವಾಗ ಅವರು ಬಳಸಿರುವ ಭಾಷೆ ಓದುಗರ ಗಮನವನ್ನು ಸೆಳೆಯುತ್ತದೆ. ಇವರ ಎಲ್ಲ ಕಥೆಗಳು ಮನುಷ್ಯ ಸಹಜ ದ್ವೇಷ, ಅಸೂಯೆ, ದಾಯಾದಿತನದ ಕೇಡುಗಳನ್ನು ನೈಜವಾಗಿ ತಿಳಿಸುತ್ತವೆ. ಗ್ರಾಮೀಣ ಪರಿಸರದ ನಾಣ್ನುಡಿ, ನುಡಿಗಟ್ಟು ಗಾದೆ ಮಾತುಗಳನ್ನು ವಾಕ್ಯ ಸರಣಿಯಲ್ಲಿ ಬಳಸುವುದರಿಂದ

ಇವರ ಕಥೆಗಳಿಗೆ ಒಂದು ವಿಶಿಷ್ಟ ಆಯಾಮ ದೊರಕಿದಂತಾಗಿದೆ. 'ಕಣ್ಣಿಕಿತ್ತ' ಹಸು ಕಥೆಯಲ್ಲಿ ಬರುವ ಮುತ್ತಮನ ಪಾತ್ರ ಮಾನವೀಯತಯ ನಡವಳಿಕೆಗೆ ಉತ್ತಮ ನಿದರ್ಶನವಾಗಿದೆ. ಊರಿನ ಮುಖಂಡರೆನಿಸಿಕೊಂಡವರು ದುಷ್ಟ ಮನಸ್ಸಿನ ವ್ಯಕ್ತಿಗಳಾದರೆ, ಪರರ ಆಸ್ತಿಯನ್ನು ಕಬಳಿಸುವ ನೀಚ ಮನಸ್ಸಿನವರಾದರೆ ಶ್ರಮಜೀವಿಗಳ ಬದುಕಿನ ಮೇಲೆ ಉಂಟಾಗುವ ಪರಿಣಾಮಗಳೇನು ಎಂಬ ಚಿತ್ರಣವನ್ನು ಕತೆ ಒಳಗೊಂಡಿದೆ.

ಮಾಸ್ತಿಯವರ ಸಮಕಾಲೀನ ಪ್ರಮುಖ ಲೇಖಕರಲ್ಲಿ ಕುವೆಂಪು ಅವರು ಅತ್ಯುತ್ತಮ ಕಥ‍ನಕಾರರು. ಅವರ ಕಥ‍ೆಗಳು ಹಾಗು ಕಾದಂಬರಿಗಳು ವಾಸ್ತವವಾದಿ ನೆಲೆಯಲ್ಲಿ ರೂಪುಗೊಂಡಂತಹವು. ಕುವೆಂಪು ಅವರ ಕಥಾಸಾಹಿತ್ಯ ಕಲಾತ್ಮಕ ಅಭಿವ್ಯಕ್ತಿಗೆ ಸಾಕ್ಷಿಯಾಗಿದೆ. ನಿರೂಪಣೆ, ತಮಾಷೆ, ವರ್ಣನೆ, ವಿಶ್ಲೇಷಣೆ, ರಸಿಕತೆ, ದರ್ಶನ ಈ ಎಲ್ಲ ಗುಣಗಳು ಕುವೆಂಪು ಅವರ ಕಥಾಸಾಹಿತ್ಯದಲ್ಲಿ ನಿಚ್ಚಳವಾಗಿವೆ.

ಆದರ್ಶ ವ್ಯಕ್ತಿತ್ವ ಮತ್ತು ಸಮಾಜವಾದೀ ಸಮಾಜ ನಿರ್ಮಾಣ ಇವರ ಕಥಾಸಾಹಿತ್ಯದ ಪ್ರಮುಖ ಕನಸಾಗಿದೆ. ಸಾಮಾಜಿಕ ದರ್ಶನವೇ ಕುವೆಂಪು ಅವರ ಅನೇಕ ಕಥೆಗಳ ಗುರಿಯಾಗಿದೆ. ಅವರ 'ಧನ್ವಂತರಿಯ ಚಿಕಿತ್ಸೆ', 'ಸಾಲದ ಮಗು', 'ಯಾರು ಅರಿಯದ ವೀರ', 'ಮೀನಾಕ್ಷಿಯ ಮನೇ ಮೇಷ್ಟರು' ಕಥೆಗಳು ಅತ್ಯುತ್ತಮ ಕಥೆಗಳಾಗಿವೆ. ರೈತನ ಬದುಕನ್ನು ಅವನ ಯಾತನೆಯನ್ನು ಧನ್ವಂತರಿಯ ಚಿಕಿತ್ಸೆ ಕಥೆಯಲ್ಲಿ ಅಪೂರ್ವವಾಗಿ ಚಿತ್ರಿಸಲಾಗಿದೆ. ಎಲ್ಲರ ಏಳಿಗೆಗೆ ಕಾರಣಕರ್ತನಾದ ರೈತನ ಎದೆಯ ಮೇಲಿನ ಭಾರವಳನ್ನಿಳಿಸಲು ಧನ್ವಂತರಿಯೆ ಬರಬೇಕಾಯಿತು ಎಂಬ ದಾರ್ಶನಿಕ ಸಂಗತಿಯನ್ನು ಕುವೆಂಪು ತಿಳಿಸಿದ್ದಾರೆ. 'ಯಾರೂ ಅರಿಯದ ವೀರ' ಕಥೆಯಲ್ಲಿ ನದಿಯ ನೀರಿನ ಪ್ರವಾಹಕ್ಕೆ ಸಿಕ್ಕಿದ ತನ್ನ ದಣಿಯ ಕುಟುಂಬವನ್ನು ಪಾರು ಮಾಡಲು ಜೀತಗಾರನಾದ ಲಿಂಗ ತನ್ನ ಜೀವದ ಹಂಗನ್ನು ತೊರೆದು ಹೋರಾಟ ಮಾಡುತ್ತಾನೆ. ಲೋಕವೇ ಅವನನ್ನು ಕಳ್ಳ ಎಂದು ದೂರ ಮಾಡಿದ್ದಾಗ ಅನ್ನವಿಟ್ಟು ಆಶ್ರಯಕೊಟ್ಟ ಸುಬ್ಬಣ್ಣಗೌಡರಿಗೆ ತನ್ನ ಜೀವವನ್ನೇ ಅರ್ಪಿಸಲು ಸಿದ್ದವಾದ ಲಿಂಗನ ತ್ಯಾಗ ಮಹತ್ತರವಾಗಿದೆ.

ನವೋದಯ ಕಥೆಗಾರ್ತಿಯಲ್ಲಿ ಮುಖ್ಯವಾಗಿ ಸರಸ್ವತೀಬಾಯಿ ರಾಜವಾಡೆ (ಗಿರಿಬಾಲೆ), ಕೊಡಗಿನ ಗೌರಮ್ಮ, ಶ್ಯಾಮಲಾದೇವಿ ಬೆಳಗಾಂವಕರ, ತಿರುಮಲಾಂಬ ಇವರು ಕಂಡು ಬರುತ್ತಾರೆ. ಈ ಕಥೆಗಾರ್ತಿಯರು ಅಸ್ಪೃಶ್ಯತೆ, ಬಂಜೆತನ, ವೇಶ್ಯಾಸಮಸ್ಯೆ, ವರದಕ್ಷಿಣೆ, ಬಹಿಷ್ಕಾರ, ವಿಧವಾ ಸಮಸ್ಯೆ ಮುಂತಾದ ಸಾಮಾಜಿಕ ಸಮಸ್ಯೆಗಳ ಬಗ್ಗೆ ತುಂಬಾ ದಿಟ್ಟತನದಿಂದ ಬರೆದಿದ್ದಾರೆ. ದಕ್ಷಿಣ ಕನ್ನಡದ ಸರಸ್ವತೀಬಾಯಿ ರಾಜವಾಡೆಯವರು ತಮ್ಮ 'ಆಹುತಿ' ಮುಂತಾದ ಕಥೆಗಳ ಮೂಲಕ ಬಡತನ, ಜೀತಪದ್ಧತಿ, ಸ್ತ್ರೀ ಸಮಸ್ಯೆ ಹಾಗೂ ಪ್ರೇಮದ ವಿವಿಧ ಮುಖಗಳನ್ನು ಚಿತ್ರಿಸಿದ್ದಾರೆ. ಬಡವರ ಬವಣೆಯ ಬಗ್ಗೆ ಇವರ ಲೇಖನಿ ರೋಷವಾಗಿ ಕಾಣಿಸಿಕೊಂಡಿದೆ. ವ್ಯಂಗ್ಯದ ಮೊನಚಿನಿಂದ ಸಮಾಜವನ್ನು ಚುಚ್ಚಿ, ಎಚ್ಚರಿಸುವ ಪ್ರಯತ್ನವನ್ನು ತಮ್ಮ 'ಬಡವರ ಕಣ್ಣೀರು', 'ಪ್ರಪಂಚ' ಕತೆಗಳಲ್ಲಿ ಮಾಡಿದ್ದಾರೆ. ಬದುಕನ್ನು ಇವರಿಗಿಂತ ಭಿನ್ನವಾಗಿ ನೋಡುವ ಮತ್ತು ನಿರೂಪಿಸುವ ದೃಷ್ಟಿಯಿಂದ ಕೊಡಗಿನ ಗೌರಮ್ಮನವರು ಗಮನ ಸೆಳೆಯುತ್ತಾರೆ. ಇವರ ಕತೆಗಳಾದ 'ಕಂಬನಿ', 'ವಾಣಿಯ ಸಮಸ್ಯೆ', 'ಅವಳ ಭಾಗ್ಯ'

ಮುಂತಾದವುಗಳಲ್ಲಿ ಸಂಪ್ರದಾಯಬದ್ಧವಾಗಿರುವ ಹೆಣ್ಣನ್ನು ಚಿತ್ರಿಸಿರುವ ಬಗೆ ಪ್ರಸ್ತುತ ಸಂದರ್ಭಕ್ಕೆ ಸವಾಲಾಗುತ್ತದೆ."[೮] 'ವಾಣಿಯ ಸಮಸ್ಯೆ' ಕಥೆಯ ಇಡೀ ವಾತಾವರಣ ಸಂಪ್ರದಾಯಬದ್ಧವಾದದ್ದು. ಇಂದು ವಿಧವೆ ತನ್ನ ಮನೆಯಲ್ಲಿ ಒಬ್ಬಂಟಿಯಾಗಿ ವಾಸಿಸುತ್ತಿರುತ್ತಾಳೆ. ನೆರಮನೆಗೆ ವಾಣಿ ಮತ್ತು ಆಕೆಯ ಗಂಡ ರತ್ನ ಬಾಡಿಗೆಗೆ ಬರುತ್ತಾರೆ. ಧರ್ಮಭೀರುವಾದ ಇಂದುವಿಗೆ ವಾಣಿಯ ಪರಿಚಯ ವಾಗುತ್ತದೆ. ಇಬ್ಬರ ನಡುವೆ ಆತ್ಮೀಯವಾದ ಗೆಳೆತನ ಬೆಳೆಯುತ್ತದೆ. ರತ್ನ ಇಂದುವನ್ನು ನೋಡಿ ಮೋಹಗೊಳ್ಳುತ್ತಾನೆ. ಇಂದುವಿಗು ರತ್ನನ ಮೇಲೆ ಪ್ರೇಮದ ಭಾವನೆ ಉಂಟಾಗುತ್ತದೆ. ಆದರೆ ಸಂಪ್ರದಾಯದ ಚೌಕಟ್ಟನ್ನು ಮೀರಿ ನಡೆದುಕೊಂಡರೆ ಪಾಪ ತಟ್ಟಬಹುದೆಂಬ ಭೀತಿ ಅವಳನ್ನು ಕಾಡುತ್ತದೆ. ಆದರೆ ತನ್ನ ಅಂತರಂಗದಲ್ಲಿ ಉಂಟಾದ ತಳಮಳವನ್ನು ಎದುರಿಸಲಾರದೆ ತನ್ನ ಮನೆಯಿಂದ ದೂರ ಹೋಗುತ್ತಾಳೆ. ಆದರೆ ವಾಣಿಗೆ ಇಂದು ಎಲ್ಲಿ ಹೋದಳು ಎಂಬುದೆ ಸಮಸ್ಯೆಯಾಗುತ್ತದೆ. "ಸಂಪ್ರದಾಯಬದ್ಧವಾದ ನಮ್ಮ ಸಮಾಜದ ಮೌಲ್ಯಗಳನ್ನು ನಂಬಿಕೆಗಳನ್ನು ಕೊಡಗಿನ ಗೌರಮ್ಮನವರು ಉತ್ತಮವಾಗಿ ನಿರೂಪಿಸಿದ್ದಾರೆ. ಹೆಣ್ಣಿನ ಬಾಳಿನ ತೊಡಕು ತೊಂದರೆಗಳನ್ನು ಇವರು ಅಂತಃಕರಣದ ನಯದಿಂದ ತಮ್ಮ ಕತೆಗಳ ಮೂಲಕ ಚಿತ್ರಿಸಿದ್ದಾರೆ" ಎಂಬುದಾಗಿ ಕೀರ್ತಿನಾಥ ಕುರ್ತುಕೋಟಿಯವರು ತಿಳಿಸಿದ್ದಾರೆ.[೯]

"ಇದೇ ಮಾರ್ಗದಲ್ಲಿ ಹೆಸರಿಸಬಹುದಾದ ಮತ್ತೊಬ್ಬ ಕತೆಗಾರ್ತಿ ಎಂದರೆ ಕರ್ನಾಟಕದ ಶ್ಯಾಮಲದೇವಿ ಬೆಳಗಾವಂಕರ ಅವರು. ಇವರು ನವೋದಯದ ಮೊದಲ ಪೀಳಿಗೆಯ ಕತೆಗಾರ್ತಿ. ಈ ಎಲ್ಲಾ ಲೇಖಕಿಯರ ಮುಂದೆ ಇದ್ದ ಆಗಿನ ಬಹುದೊಡ್ಡ ಸಮಸ್ಯೆಯೆಂದರೆ ಪುರುಷ ಪ್ರಧಾನ ಸಮಾಜದ ವಿರುದ್ಧ ಹೋರಾಡುವುದು, ಸಾಮಾಜಿಕವಾದ ಪ್ರಶ್ನೆಗಳನ್ನು ಬಿಡಿಸುವುದು. ಶ್ಯಾಮಲಾದೇವಿ ಬೆಳಗಾವಂಕರ 'ಕರುಳ ಕತ್ತರಿ' ಎಂಬ ಕಥೆಯು ಮೇಲೆ ಹೇಳಿದ ಸಾಮಾಜಿಕ ಸಮಸ್ಯೆಗಳಿಗೆ ಸಂಕೇತವಾಗಿದೆ."[೧೦] ಎಂಬುದಾಗಿ ಡಾ. ಕರೀಗೌಡ ಬೀಚನಹಳ್ಳಿಯವರು ತಿಳಿಸಿದ್ದಾರೆ.

ಸಣ್ಣಕತೆಗಳ ಕ್ಷೇತ್ರದಲ್ಲಿ ಮಾಸ್ತಿವೆಂಕಟೇಶ ಅಯ್ಯಂಗಾರರ ಹೆಸರು ಬಹಳ ದೊಡ್ಡದು 'ಮಾಸ್ತಿ ಕನ್ನಡದ ಆಸ್ತಿ', 'ಸಣ್ಣಕಥೆಗಳ ಜನಕ' ಎಂದು ಪ್ರಸಿದ್ಧರಾಗಿದ್ದಾರೆ. ಇವರು ಕನ್ನಡ ನಾಡಿಗೆ ಕೊಟ್ಟಿರುವ ಸಾಹಿತ್ಯರೂಪದ ಆಸ್ತಿಯೂ ಹಿರಿದಾದುದ್ದಾಗಿದೆ. ಮಾಸ್ತಿ ನವೋದಯ ಕತೆಗಾರರಲ್ಲಿ ಪ್ರಮುಖರಾಗಿದ್ದಾರೆ. ಸಣ್ಣಕತೆಗೆ ಒಂದು ಸ್ವರೂಪವನ್ನು ತಂದುಕೊಟ್ಟು ಅದನ್ನು ಜೀವ ಚಿಂತನೆಯ ಮಾಧ್ಯಮವಾಗಿಸಿ ಭಾಷೆಯನ್ನು ಅದಕ್ಕೆ ಹದಗೊಳಿಸಿದವರೆಂದರೆ ಮಾಸ್ತಿ. ಕಥೆ ಹೇಳುವುದರಲ್ಲಿ, ಕಥೆಯಲ್ಲಿ ಬರುವ ಪಾತ್ರಗಳನ್ನು ಅವುಗಳ ಭಾವ ಭಾವನೆಗಳನ್ನು ಅತಿ ಸಹಜವಾದ ರೀತಿಯಲ್ಲಿ ಮನಮುಟ್ಟುವಂತೆ ಚಿತ್ರಿಸುವುದರಲ್ಲಿ ಅವರು ತೋರುವ ಕೌಶಲ ಅಪೂರ್ವವಾದದ್ದು. ವಿಶಾಲ ಲೋಕಾನುಭವ, ಯಾವುದೇ ಸನ್ನಿವೇಶವಾಗಲಿ, ಮಾನವೀಯತೆಯ ದೃಷ್ಟಿಯಿಂದ ಕಾಣುವ ಹೃದಯವಂತಿಕೆ ಇವರ ಕಥೆಗಳಿಗೆ ಜೀವಕಳೆಯನ್ನು ತುಂಬುತ್ತವೆ. "ಅವರ ಎಲ್ಲ ಸಾಮಾಜಿಕ ಕತೆಗಳೂ ಜೀವನ ಶ್ರದ್ಧೆಯನ್ನು ಪ್ರತಿಬಿಂಬಿಸುತ್ತವೆ. ಐತಿಹಾಸಿಕ ಕತೆಗಳಲ್ಲಿ ನಮ್ಮ ಪರಂಪರೆಯ ಸಂಸ್ಕೃತಿ ಪ್ರವಾಹವನ್ನು ಕಾಣುತ್ತೇವೆ"[೧೧]

"ಇವರ ಕತೆಗಳಲ್ಲಿ ಬರುವ 'ರಂಗಪ್ಪ', 'ರಂಗಸ್ವಾಮಿ', 'ರಾಮಸ್ವಾಮಿ', 'ವೆಂಕಟಶಾಮಿಯ ಪ್ರಣಯ', 'ಜೋಗೇರ ಅಂಜಪ್ಪ', 'ಮೊಸರಿನ ಮಂಗಮ್ಮ', 'ಬೈಚೇಗೌಡ', 'ನಿಜಗಲ್ಲಿನ ರಾಣಿ', 'ಮಸುಮತ್ತಿ' ಮುಂತಾದ ಕತೆಗಳಲ್ಲಿ ನಿಜಜೀವನದಲ್ಲಿ ಕಾಣುವ ವ್ಯಕ್ತಿಗಳೇ ಆಗಿರುವುದರಿಂದ ಅವರ ಅನುಭವಗಳೂ ಸಾಮಾನ್ಯವಾದಂಥವೇ ಆಗಿರುತ್ತವೆ. 'ವೆಂಕಟಶಾಮಿಯ ಪ್ರಣಯ' ಮಾಸ್ತಿಯವರ ಪ್ರಸಿದ್ಧ ಕಥೆಗಳಲ್ಲಿ ಒಂದಾಗಿದೆ. ಮಾಸ್ತಿಯವರ ಕಥಾಶೈಲಿ, ನಿರೂಪಣಾ ತಂತ್ರದ ಲಕ್ಷಣಗಳೆಂದು ಗುರುತಿಸಲಾದ ನೇರ, ಸರಳ ಹಾಗು ನಿರುದ್ವಿಗ್ನ ಮೊದಲಾದ ಗುಣಗಳ ಅಭಿವ್ಯಕ್ತಿಗೆ ಈ ಕಥೆ ಸಾಕ್ಷಿಯಾಗಿದೆ. ಈ ಕಥೆಯ ವಸ್ತು ಹಳ್ಳಿಯೊಂದರ ಕ್ಷೌರಿಕ ಹುಡುಗ ವೆಂಕಟಶಾಮಿ ಮತ್ತು ಆಗಷ್ಟೇ ಆ ಹಳ್ಳಿಗೆ ಬಂದಿದ್ದ ದೊಂಬರ ಹುಡುಗಿ ಇವರ ಪ್ರಣಯ. ಆದರೆ ಇವರ ಪ್ರಣಯ ಬಲಿತು ಮದುವೆ ಆಗುವುದಕ್ಕೆ ಮುಂಚೆಯೇ ವೆಂಕಟಶಾಮಿ ಜ್ವರಕ್ಕೆ ತುತ್ತಾಗಿ ಸಾಯುತ್ತಾನೆ. ಸಾಯುವ ಮೊದಲು ಆತ ತನ್ನ ತಂದೆಗೆ ತಾನು ಸತ್ತಮೇಲೆ ತನ್ನ ಹೆಣವನ್ನು ತಮ್ಮ ಹೊಲದ ಪಕ್ಕದಲ್ಲಿರುವ ಹುಲ್ಲು ಮೆದೆಯಲ್ಲಿ ಹಾಕಬೇಕೆಂದು ಹೇಳುತ್ತಾನೆ. ಕೊನೆಗೆ ಕಥೆ ಮುಗಿದಾಗ ವೆಂಕಟಶಾಮಿ ಮತ್ತು ಅವನು ಪ್ರೀತಿಸಿದ ದೊಂಬರ ಹುಡುಗ ಓದುಗರ ವಿಷಾದ ತುಂಬಿದ ಸಹಾನುಭೂತಿಗೆ ಪಾತ್ರರಾಗುತ್ತಾರೆ. ಬದುಕಿನ ಅನುಭವಗಳ್ನು ವಿವಿಧ ಮನೋಧರ್ಮದ ನೆಲೆಯಿಂದ ಬೆಲೆಕಟ್ಟುತ್ತಾರೆ. ಪ್ರೀತಿ, ಪ್ರಣಯ ಮತ್ತು ಸಾಮಾಜಿಕ ಅಂಶಗಳನ್ನು ಗೌಣವಾಗಿಸಿ ಮಾನವೀಯತೆಯನ್ನು ಪ್ರಧಾನವಾಗಿ ಎತ್ತಿ ಹಿಡಿಯುತ್ತದೆ"[೧೨] ಎಂಬುದಾಗಿ ಡಾ. ಕರೀಗೌಡ ಬೀಚನಹಳ್ಳಿಯವರು ತಿಳಿಸಿದ್ದಾರೆ. ಮಾಸ್ತಿಯವರ ಕಥೆಗಳಲ್ಲಿ ಪ್ರಾದೇಶಿಕ ವಿವರಗಳು, ಮನುಷ್ಯನ ಘನತೆಯ ಬಗೆಗಿನ ಪ್ರತಿಪಾದನೆ ಮತ್ತು ಬದುಕಿನ ಬಗೆಗಿನ ಪ್ರೀತಿ ಪ್ರಧಾನವಾಗಿ ವ್ಯಕ್ತವಾಗುತ್ತವೆ.

ನವೋದಯ ತಲೆಮಾರಿನ ಕಥಾಸಾಹಿತ್ಯ ಅನೇಕ ದೃಷ್ಟಿಯಿಂದ ಸಮೃದ್ಧವಾಗಿದೆ. ನವೋದಯ ಕಾಲಘಟ್ಟದ ಸಣ್ಣಕಥೆಗಳ ಎತ್ತರ ಬಿತ್ತರ ವಿಸ್ತಾರವಾದುದಾಗಿದೆ. ಈ ತಲೆಮಾರಿನ ಕಥೆಗಾರರು ಇನ್ನು ಹಲವಾರು ಜನರಿದ್ದಾರೆ. ನವೋದಯ ಕಾಲದ ಸಣ್ಣಕಥೆಗಳ ಸ್ಥೂಲ ಸ್ವರೂಪವನ್ನು ಮಾತ್ರ ಇಲ್ಲಿ ನಿರೂಪಿಸಲಾಗಿದೆ.

## ಅಡಿಟಿಪ್ಪಣಿಗಳು

೧. ಡಾ. ಕರೀಗೌಡ ಬೀಚನಹಳ್ಳಿ, *ಶತಮಾನದ ಸಣ್ಣ ಕಥೆಗಳ ಸಮೀಕ್ಷೆ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩, ಪು. ೪೩.

೨. ಅದೇ, ಪು. ೧೨.

೩. ಅದೇ, ಪು. ೪೮.

೪. ಅದೇ, ಪು. ೪೯

೫. ಕೀರ್ತಿನಾಥ ಕುರ್ತಕೋಟಿ, *ಯುಗ ಧರ್ಮ ಹಾಗು ಸಾಹಿತ್ಯ ದರ್ಶನ*, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೩, ಪು. ೨೦೫.

೬. ಡಾ. ಕರೀಗೌಡ ಬೀಚನಹಳ್ಳಿ, *ಶತಮಾನದ ಸಣ್ಣ ಕಥೆಗಳ ಸಮೀಕ್ಷೆ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩, ಪು. ೫೦.

೭. ಕೀರ್ತಿನಾಥ ಕುರ್ತುಕೋಟಿ, *ಯುಗಧರ್ಮ ಹಾಗು ಸಾಹಿತ್ಯ ದರ್ಶನ*, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೩, ಪು. ೨೧೨.

೮. ಡಾ. ಕರೀಗೌಡ ಬೀಚನಹಳ್ಳಿ, *ಶತಮಾನದ ಸಣ್ಣ ಕಥೆಗಳ ಸಮೀಕ್ಷೆ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩, ಪು. ೫೪.

೯. ಕೀರ್ತಿನಾಥ ಕುರ್ತುಕೋಟಿ, *ಯುಗಧರ್ಮ ಹಾಗು ಸಾಹಿತ್ಯ ದರ್ಶನ*, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೨, ಪು. ೨೧೪.

೧೦. ಡಾ. ಕರೀಗೌಡ ಬೀಚನಹಳ್ಳಿ, *ಶತಮಾನದ ಸಣ್ಣ ಕಥೆಗಳ ಸಮೀಕ್ಷೆ* ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩, ಪುಟ. ೫೪.

೧೧. ಕೀರ್ತಿನಾಥ ಕುರ್ತುಕೋಟಿ, *ಯುಗಧರ್ಮ ಹಾಗು ಸಾಹಿತ್ಯ ದರ್ಶನ*, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೩, ಪು. ೧೯೭.

೧೨. ಡಾ. ಕರೀಗೌಡ ಬೀಚನಹಳ್ಳಿ, *ಶತಮಾನದ ಸಣ್ಣ ಕಥೆಗಳ ಸಮೀಕ್ಷೆ*, ಕರ್ನಾಟಕ ಸಾಹಿತ್ಯ ಅಕಾಡೆಮಿ', ಬೆಂಗಳೂರು, ೨೦೦೩, ಪು. ೫೭.

ಪ್ರತಿಯೊಬ್ಬ ಲೇಖಕನು ಸಾಹಿತ್ಯ ನಿರ್ಮಿತಿಗಾಗಿ ವಸ್ತುವೊಂದನ್ನು ಆಯ್ದುಕೊಳ್ಳುವನು. ಅದು ಅವನ ಅನುಭವ ಪ್ರಪಂಚದಿಂದ ರೂಪುಗೊಂಡಿರುವುದು. ಆದರೆ ಅದು ಕಲಾಕೃತಿಯಾಗುವುದು ಕಲ್ಪನೆಯ ಕೈವಾಡದಿಂದ. ಕವಿಯ ಕಥನ ಕೌಶಲದಿಂದ ಉಂಟಾಗುವ ಕಥಾನಕದಲ್ಲಿ ಜೀವಕಳೆಯು ತುಂಬಿರಬೇಕಾಗುವುದು. ಹಾಗಾಗಿ ಕುವೆಂಪು ಅವರು ತಮ್ಮ ಅದ್ಭುತವಾದ ಪ್ರತಿಭೆ ಹಾಗೂ ಲೋಕಾನುಭವದ ಮೂಲಕ ವಾಸ್ತವಿಕ ಬದುಕಿನ ವೈವಿಧ್ಯಮಯವಾದ ವಸ್ತು ಹಾಗೂ ಶೈಲಿಯನ್ನು ಕಥೆಗಳಲ್ಲಿ ಪ್ರಕಟಗೊಳಿಸಿರುವುದನ್ನು ಕಾಣಬಹುದು.

ಕುವೆಂಪು ಅವರು ಸಾಹಿತ್ಯ ರಚನೆಗೆ ತೊಡಗಿದ ಕಾಲಘಟ್ಟದ ಬಗೆಗೆ ಡಾ|| ಎ. ಎಸ್. ವೇಣುಗೋಪಾಲರಾವ್ ತಮ್ಮ ಅಭಿಪ್ರಾಯಗಳನ್ನು ತಿಳಿಸುತ್ತ "ಕುವೆಂಪು ಅವರು ಸಾಹಿತ್ಯ ರಚನೆಗೆ ತೊಡಗಿದ ಕಾಲ ನವವಿಚಾರಗಳ ಜಾಗೃತಿಯ ಸಂದರ್ಭ. ಮುಖ್ಯವಾಗಿ ರಾಜಕೀಯವಾಗಿ, ಸಾಮಾಜಿಕವಾಗಿ ಆದರ್ಶದ ಹೊಸಬೆಳಕು ಮೂಡುತ್ತಿದ್ದ ಕಾಲ. ನಾಡು, ನುಡಿಯ ಪ್ರೇಮ, ಬಡವ ಬಲ್ಲಿದರ ನಡುವಿನ ಕಣ್ಣುಕುಕ್ಕುವ ಅಂತರ, ಜಾತಿ ವೈಷಮ್ಯದಿಂದ ಛಿದ್ರವಾಗುತ್ತಿದ್ದ ಹಿಂದೂ ಸಮಾಜ, ಅದು ಮೂಡಿಸಿದ ಸಾತ್ವಿಕ ರೋಷ, ಅಧ್ಯಾತ್ಮದ ವಿಚಿತ್ರ ಆಕರ್ಷಣೆ, ತ್ಯಾಗ ಬಲಿದಾನಗಳ ಸುಂದರ ಕನಸು ಇವು ಆ ಕಾಲದಲ್ಲಿ ಕವಿಯ ಮನಸ್ಸನ್ನು ಮುತ್ತಿ ಒತ್ತಿದ ಸಂಗತಿಗಳು. ಈ ಅಂಶಗಳ ನಿಚ್ಚಳ ಪ್ರಭಾವವನ್ನು ಅವರ ಕಥೆಗಳಲ್ಲಿ ಗುರುತಿಸಬಹುದು"[7]. ಅವರ ಅಭಿಪ್ರಾಯ ಸಮರ್ಥವಾಗಿದೆ. ಅಂದಿನ ಕಾಲಘಟ್ಟದ ಸಾಮಾಜಿಕ ದರ್ಶನವೇ ಕುವೆಂಪು ಅವರ ಅನೇಕ ಕಥೆಗಳ ಮುಖ್ಯ ಆಶಯವಾಗಿದೆ.

ಕುವೆಂಪು ಅವರ ಪ್ರಥಮ ಕಥಾ ಸಂಕಲನ (1936) "ಸಂನ್ಯಾಸಿ ಮತ್ತು ಇತರ ಕಥೆಗಳು". ಇದರಲ್ಲಿ 'ಸಂನ್ಯಾಸಿ', 'ಕ್ರಿಸ್ತನಲ್ಲ ಪಾದ್ರಿಯ ಮಗಳು' 'ಈಶ್ವರನೂ ನಕ್ಕಿರಬೇಕು', 'ಆರಾಣೆ ಮೂರು ಕಾಸು', 'ಯಾರೂ ಅರಿಯದ ವೀರ', 'ಹೋಳಿಗೆ ಪ್ರತಿಜ್ಞೆ', 'ಮಾಯದ ಮನೆ', 'ದೆವ್ವದ ಕಾಟ', 'ಶ್ರೀಮನ್ನೂಕವಾಗಿತ್ತು'. ಹೀಗೆ ಒಂಬತ್ತು ಕಥೆಗಳಿವೆ. ಕುವೆಂಪು ಅವರ ಎರಡನೆಯ ಕಥಾಸಂಕಲನ "ನನ್ನ ದೇವರು ಮತ್ತು ಇತರೆ ಕಥೆಗಳು" (1940) ಇದರಲ್ಲಿ 'ನನ್ನ ದೇವರು', 'ಸಾಲದ ಮಗು', 'ಆದರ್ಶ ಸಾಧನೆ', 'ಔದಾರ್ಯ' , 'ಗಂಟು' ಅಥವಾ 'ಗುಪ್ತಧನ', 'ಮೀನಾಕ್ಷಿಯ ಮನೆ ಮೇಷ್ಟರು', 'ಧನ್ವಂತರಿಯ ಚಿಕಿತ್ಸೆ', 'ವೈರಾಗ್ಯದ ಮಹಿಮೆ', ಎಂಬ ಎಂಟು ಕಥೆಗಳಿವೆ.

ಕುವೆಂಪು ಅವರ ಕಥೆಗಳಲ್ಲಿರುವ ವಸ್ತು ಮತ್ತು ಶೈಲಿ ವೈವಿಧ್ಯಮಯವಾಗಿದ್ದು ಬೆರಗುಗೊಳಿಸುವಂಥದ್ದು. ಮಾನವ ಬದುಕಿನ ಸ್ವಾರ್ಥ, ದುರಾಸೆ, ಕ್ರೌರ್ಯ, ಶೋಷಣೆ, ಸಣ್ಣತನ, ಮೌಢ್ಯತೆ, ಬಡತನ, ಹಣದ ದಾಹ, ಹಾಸ್ಯ ಮುಂತಾದ ಸಂಗತಿಗಳನ್ನು ಕುವೆಂಪು ಅವರು ತಮ್ಮದೇ ಆದ ವಿಶಿಷ್ಟವಾದ ಶೈಲಿಯಲ್ಲಿ ನಿರೂಪಿಸಿದ್ದಾರೆ. ಕುವೆಂಪು ಅವರ ಕಥೆಗಳ ಶೈಲಿಯಲ್ಲಿ ತಮಾಷೆ, ವರ್ಣನೆ, ವಿಶ್ಲೇಷಣೆ, ರಸಿಕತೆ, ದರ್ಶನ ಈ ಎಲ್ಲ ಸಂಗತಿಗಳನ್ನು ಕಾಣಬಹುದಾಗಿದೆ.

ಕುವೆಂಪು ಅವರ ಶೈಲಿ ತನ್ನದೇ ಆದ ವಿಶಿಷ್ಟತೆಯನ್ನು ಹೊದಿದೆ. ದೇಜಗೌ ಅವರು ಕುವೆಂಪು ಶೈಲಿಯ ಬಗ್ಗೆ ತಿಳಿಸುತ್ತಾ "ಕುವೆಂಪು ಶೈಲಿಯ ವಿಶ್ವರೂಪ ವೈಭವಕ್ಕೆ ಪೂರ್ವೋಕ್ತ ಸಂಸ್ಕಾರಗಳಿಗಿಂತಕ

ಮಿಗಿಲಾಗಿ ಅವರ ಅಸಾಧಾರಣವಾದ ಪ್ರತಿಭೆ, ಭಾವಸಂಪತ್ತು, ಅನುಭವ ಶ್ರೀಮಂತಿಕೆ ಹಾಗೂ ಬೌದ್ಧಿಕ ಶ್ರೀ ಕಾರಣವೆಂಬುದನ್ನು ಮರೆಯುವಂತಿಲ್ಲ."[೨] ಎಂದು ಹೇಳಿದ್ದಾರೆ.

ಕುವೆಂಪು ಅವರ ಕಥೆಗಳು ವಸ್ತು, ಶೈಲಿ, ನಿರೂಪಣೆಗಳ ದೃಷ್ಟಿಯಿಂದ ಗಮನಾರ್ಹವಾಗಿದೆ. ಅವರ ಎಲ್ಲ ಕಥೆಯ ವಸ್ತು ತಾವು ಕಂಡುಕೊಂಡ ಸಮಾಜದ ವಾಸ್ತವಿಕ ಬದುಕನ್ನು ಆಧರಿಸಿದುದಾಗಿದೆ. ಅವರ ಕಥೆಗಳಲ್ಲಿ ಮಾನವೀಯ ಮೌಲ್ಯಗಳ ಶೋಧನೆಯನ್ನು ಕಾಣುತ್ತೇವೆ. 'ಸಂನ್ಯಾಸಿ' ಕತೆಯ ವಸ್ತು ಒಲ್ಲದ ಮದುವೆ ಮಾಡಿಕೊಂಡು ಸಂನ್ಯಾಸವನ್ನು ಸ್ವೀಕರಿಸಿ ಬದುಕಿನಿಂದ ಪಲಾಯನ ಮಾಡಿದ ಯುವಕನನ್ನು ಪುನಃ ಸಂಸಾರಕ್ಕೆ ಸೆಳೆದು ತರುವ ದಿಟ್ಟ ಹೆಣ್ಣೊಬ್ಬಳ ಪ್ರೇಮ ಶಕ್ತಿಯನ್ನು ನಿರೂಪಿಸುವ ಕಥೆಯಾಗಿದೆ. ಚೈತನ್ಯ (ರಮೇಶ) ಮತ್ತು ಮುಕುಂದ (ಇಂದಿರ) ಈ ಇಬ್ಬರೂ ತಮ್ಮ ದೃಷ್ಟಿಯಿಂದ ಬದುಕಿನ ಅರ್ಥದ ಶೋಧದಲ್ಲಿದ್ದಾರೆ. ಈ ಕತೆ ಪಾತ್ರಗಳ ಸಂಭಾಷಣೆಯಿಂದ ಆರಂಭವಾಗುತ್ತದೆ. ಮುಕುಂದನ ಮನಸ್ಸಿನಲ್ಲಿ ತೊಳಲಾಟವಿದೆ. ಹಾಗಾಗಿಯೇ ಅವನು ಮನಸ್ಸನ್ನು ಏಕಾಗ್ರತೆಯಲ್ಲಿಡಲು ಸೋಲುತ್ತಾನೆ. ಮುಕುಂದ ಈ ಮಾತುಗಳು : "ತತ್ವದಿಂದ ಶಾಂತಿ ಲಭಿಸುತ್ತದೆ ಎಂದು ತಿಳಿದಿದ್ದೆ. ಆದರೆ ಅದು ಹುಸಿಯಾಯ್ತು. ಶಾಂತಿ ನನ್ನಿಂದ ದಿನದಿನವೂ ದೂರವಾಗುತ್ತಿದೆ. [೩] ಎಂಬುದಾಗಿ ಚೈತನ್ಯನಿಗೆ ತಿಳಿಸುತ್ತಾನೆ. ಚೈತನ್ಯ ಕಾಮನೆಗಳನ್ನು ಗೆದ್ದಿಲ್ಲ, ಅವನ ಮನದಲ್ಲಿಯೂ ಅಶಾಂತಿ ತುಂಬಿದೆ. ಪತಿಯನ್ನು ತನ್ನವನನ್ನಾಗಿ ಮಾಡಿಕೊಳ್ಳಲು ಮುಕುಂದ ಕಷಾಯ ವಸ್ತ್ರಧಾರಣೆ ಮಾಡಿದ್ದಾನೆ. ಇಬ್ಬರೂ ಒಂದೊಂದು ಹಂತದಲ್ಲಿ ಲೌಕಿಕಕ್ಕಾಗಿ ತುಡಿಯುತ್ತಿರುವವರೇ ಆಗಿದ್ದಾರೆ. ಇಂದಿರ ಪ್ರೇಮಾನಂದರ ಬಳಿ ತನ್ನ ಪತಿಯನ್ನು ಸಾಂಸಾರಿಕ ಜೀವನಕ್ಕೆ ಮರಳಿ ಬರುವಂತೆ ಮಾಡಬೇಕೆಂದು ಬೇಡುತ್ತಾಳೆ. "ಸಂನ್ಯಾಸಿಯಾದವನು ಪುನಃ ಸಂಸಾರಿಯಾಗುವುದು ಮಹಾಪಾಪ ! ಚೈತನ್ಯನಿಗೆ ಅನಿಷ್ಟ. ಕೈ ಹಿಡಿದವಳನ್ನು ದುಃಖಸಾಗರಕ್ಕೆ ಕಲ್ಲುಕಟ್ಟಿ ಎಸೆಯುವುದಕ್ಕಿಂತ ಮಹಾಪಾಪವೆ ? ಅದಕ್ಕಿಂತ ಹೆಚ್ಚಿನ ಅನಿಷ್ಟವುಂಟಾಗುವುದೆ ?"[೪] ಎಂಬ ಮಾತುಗಳಲ್ಲಿ ಸಂಸಾರದಲ್ಲಿದ್ದುಕೊಂಡೇ ಸಮಸ್ಯೆಗಳನ್ನು ಎದುರಿಸುತ್ತ, ಬದುಕಿನ ಸವಾಲುಗಳನ್ನು ಸ್ವೀಕರಿಸುತ್ತ, ನೋವು, ನಲಿವುಗಳ ಮಧ್ಯ ಬದುಕನ್ನು ನಡೆಸುವುದೇ ಮುಖ್ಯ ಎಂಬ ವಾಸ್ತವತೆಯನ್ನು ಕುವೆಂಪು ಕಟ್ಟಿಕೊಟ್ಟಿದ್ದಾರೆ. ಸಂನ್ಯಾಸತ್ವಕ್ಕಿಂತ ಮನೋವಿಕಾರವಿಲ್ಲದ ಪರಿಶುದ್ಧವಾದ ಸಾಂಸಾರಿಕ ಜೀವನ ಶ್ರೇಷ್ಠವಾದುದು ಎಂಬ ಆಶಯ ವ್ಯಕ್ತವಾಗುತ್ತದೆ.

ಇಂದಿರ ತನ್ನಿಂದ ದೂರವಾಗಿ ಸಂನ್ಯಾಸಿಯಾಗಿರುವ ಪತಿಯನ್ನು ಕರೆತರುವುದಕ್ಕಾಗಿ ಮಾಡಿದ ಪ್ರಯತ್ನ, ಅನುಭವಿಸುವ ಕಷ್ಟ, ಗುರುವಾದ ಪ್ರೇಮಾನಂದರಿಗೂ ಕನಿಕರ ಉಂಟಾಗುತ್ತದೆ. ಹಾಗಾಗಿಯೆ ಚೈತನ್ಯನು "ಗುರುದೇವ ಮುಂದೇನು ಮಾಡಲಿ ?" ಎಂದು ಕೇಳಿದಾಗ ನೀನು ಸ್ವತಂತ್ರನು, ನನ್ನ ಅನುಜ್ಞೆಯಿದೆ. ನನ್ನ ಆಶೀರ್ವಾದವಿದೆ. ಏನು ಬೇಕಾದರು ಮಾಡು ! ಏನು ಮಾಡಿದರೂ ನೀನು ಹಾಳಾಗುವುದಿಲ್ಲ."[೫] ಎಂಬ ಮಾತುಗಳಲ್ಲಿ ಮಾನವೀಯತೆ ಮುಖ್ಯವಾಗಿದೆ. ಹಾಗಾಗಿಯೆ ಕಥೆಯು ವಸ್ತುವಿನ ದೃಷ್ಟಿಯಿಂದ ಮಹತ್ವದ್ದಾಗಿದೆ. ಕುವೆಂಪು ಅವರು ಸಂನ್ಯಾಸತ್ವಕ್ಕಿಂತ ಸಾಂಸಾರಿಕ ಬದುಕಿಗೆ ಹೆಚ್ಚಿನ ಮಹತ್ವ ನೀಡಿದ್ದಾರೆ. ಇಂದಿರೆ ರಮೇಶನನ್ನು ಅಪ್ಪಿಕೊಂಡು "ನೀನೀಗ ನಿಜವಾಗಿಯು ಸಂನ್ಯಾಸಿ"[೬] ಎಂದು ಹೇಳುವ ಮಾತು ಅರ್ಥಪೂರ್ಣವಾಗಿದೆ. ಸಂನ್ಯಾಸಿಯಾದವನು ಯಾರ ಮನಸ್ಸಿಗೂ ನೋವುಂಟು ಮಾಡುವುದಿಲ್ಲ.

ಸಕಲಜೀವರಾಶಿಗಳಿಗೆ ಒಳಿತನ್ನು ಬಯಸುತ್ತಾನೆ ಎಂಬ ಅರ್ಥವನ್ನು ಮೇಲಿನ ಮಾತು ತಿಳಿಸುತ್ತದೆ. ಕತೆಯಲ್ಲಿ ಓದುಗರಿಗೆ ಒಂದು ಸಂದೇಹ ಕಾಡುತ್ತದೆ. ಇಂದಿರೆ ಆಶ್ರಮದಲ್ಲಿ ಬಹಳ ಕಾಲದವರೆಗು ರಮೇಶನ ಜೊತೆಯಲ್ಲಿಯೇ ಇದ್ದರೂ ಅವನಿಗೆ ಅವಳು ತನ್ನ ಪತ್ನಿ ಎಂಬ ಗುರುತು ಸಿಗಲಿಲ್ಲವೇ ಎನ್ನುವ ಅನುಮಾನ ಹಾಗೆಯೆ ಉಳಿಯುತ್ತದೆ.

ಎಚ್. ಜೆ. ಲಕ್ಕಪ್ಪಗೌಡರು 'ಸಂನ್ಯಾಸಿ' ಕಥೆಯ ಬಗ್ಗೆ ತಿಳಿಸುತ್ತ "ವೈಯುಕ್ತಿಕ ಮೋಕ್ಷಕ್ಕಾಗಿ ಸಂಸಾರವನ್ನು ತ್ಯಜಿಸಿ ವಿರಾಗಿಯಾದುದು ಚೈತನ್ಯನಿಗೆ ಅಷ್ಟೊಂದು ದೊಡ್ಡತನವನ್ನು ನೀಡಲಿಲ್ಲ. ಏಕೆಂದರೆ ಇದೂ ಒಂದು ರೀತಿಯ ಸ್ವಾರ್ಥವೇ. ಆದರೆ ಭವವಿದೂರವೂ ಸರ್ವಕ್ಲೇಶಹರವೂ ಮೋಕ್ಷದಾಯಕವೂ ಪರಮ ಮಂಗಳಕಾರಿಯೂ ಸರ್ವೋತ್ತಮವೂ ಆದ ವಿರಾಗ ಜೀವನವನ್ನೇ ಹೆಣ್ಣೊಬ್ಬಳ ಕಲ್ಯಾಣಾಕಾಂಕ್ಷೆಗಾಗಿ ನಿಸ್ವಾರ್ಥನಾಗಿ ತೊರೆದದ್ದು ನಿಜವಾಗಿ ದೊಡ್ಡ ಸ್ವಾರ್ಥ ತ್ಯಾಗ. ಇದೇ ಕುವೆಂಪು ದರ್ಶನ. ಇದೇ ಅರ್ಥಪರಂಪರೆಯನ್ನು ಇಂದಿರೆ ರಮೇಶನಿಗೆ ಹೇಳುವ ನೀನೀಗ ನಿಜವಾಗಿಯೂ ಸಂನ್ಯಾಸಿ ! ಎಂಬ ಮಾತಿನಲ್ಲಿ ಅವರು ಹುದುಗಿಸಿಕೊಟ್ಟಿದ್ದಾರೆ."[2] ಮೇಲಿನ ಅಭಿಪ್ರಾಯ ಒಪ್ಪಬಹುದಾಗಿದೆ. ಕುವೆಂಪು ಅವರ ದೃಷ್ಟಿ ಮಾನವೀಯ ಪರವಾಗಿದೆ.

ನಿಸರ್ಗದ ಸೌಂದರ್ಯ ವರ್ಣನೆಯಿಂದ ಕತೆ ಆರಂಭವಾಗುತ್ತದೆ. "ಮನೋಹರವಾದ ತಿಂಗಳ ಬೆಳಕು ಗಂಗೆ ಯಮುನೆಯರ ಸಂಗಮದೊಡನೆ ತಾನೂ ಸಂಗಮಿಸಿ ತೆರೆತೆರಗೂ ಹಬ್ಬಿ ತನ್ನ ಸೊಬಗಿನ ವಯ್ಯಾರಕ್ಕೆ ತಾನೆ ಹಿಗ್ಗಿ, ಹೆಮ್ಮೆಯಿಂದ ನಲಿಯುತ್ತಿತ್ತು. ಪ್ರಯಾಗ ಕ್ಷೇತ್ರದ ವನಗಳು ಕೌಮುದಿಯ ಕಡಲಿನಲ್ಲಿ ಮುಳುಗಿ ಮಲಗಿದ್ದವು. ತಂಬೆಲರು ಮೆಲ್ಲಮೆಲ್ಲನೆ ತಳಿರು ಹೂಗಳನ್ನು ಮುದ್ದಿಸಿ ಅಲ್ಲಲ್ಲಿ ಸುಳಿಸುಳಿದು ತನ್ನಿನಿಯಳನ್ನು ಅರಸುವ ವಿರಹಿಯಂತೆ ತೊಳಲುತ್ತಿತ್ತು."[8] ಇಲ್ಲಿ ಬಂದಿರುವ ಪ್ರಕೃತಿಯ ವರ್ಣನೆ ಕತೆಯ ಪಾತ್ರಗಳ ಆಶಯಕ್ಕೆ ಅನುಸಾರವಾಗಿ ಮೂಡಿ ಬಂದಿದೆ. ಈ ಸ್ವೋಪಜ್ಞದೃಷ್ಟಿಕೋನ ಕುವೆಂಪು ಕತೆಯಲ್ಲಿನ ಶೈಲಿಯ ಮಹತ್ವದ ಸಂಗತಿಯಾಗಿದೆ. ಕತೆಯ ಪಾತ್ರಗಳ ಮನದಲ್ಲಿ ಮೊರೆದು ಹರಿಯುವ ಶುದ್ಧ ಅನುರಾಗ ವಾಹಿನಿಗೆ ಅನುಗುಣವಾಗಿ ನಿಸರ್ಗದ ಸೌಂದರ್ಯವರ್ಣನೆ ಮೂಡಿಬಂದಿದೆ. 'ಸಂನ್ಯಾಸಿ' ಕಥೆ ವಸ್ತು, ಪಾತ್ರ, ಶೈಲಿ ಹಾಗೂ ತಾತ್ವಿಕ ನಿಲುವು ಈ ಎಲ್ಲ ರೀತಿಯಿಂದಲೂ ಉತ್ತಮವಾದ ಕಥೆಯಾಗಿದೆ.

ವಿದ್ಯಾರ್ಥಿ ಜೀವನದಲ್ಲಿ ಆದರ್ಶಗಳ ಕನಸು ಕಾಣುತ್ತಿದ್ದ ಯೋಗಿನ್ ಸಮಾಜದ ವಾಸ್ತವಿಕ ಬದುಕಿನಲ್ಲಿ ಆದರ್ಶಗಳಿಂದ ದೂರವಾಗಿ ಬದುಕನ್ನೇ ದುರಂತವನ್ನಾಗಿ ಮಾಡಿಕೊಳ್ಳುವ ವಸ್ತು 'ಕ್ರಿಸ್ತನಲ್ಲ ಪಾದ್ರಿಯ ಮಗಳು' ಕತೆಯಲ್ಲಿ ಮೂಡಿ ಬಂದಿದೆ. ಆದರ್ಶ ಮತ್ತು ವಾಸ್ತವ ಬದುಕು ಈ ಎರಡರಲ್ಲಿ ವಾಸ್ತವ ಬದುಕಿನ ಮುಂದೆ ಆದರ್ಶ ಕುಸಿಯುತ್ತದೆ ಎಂಬ ಸತ್ಯವನ್ನು ಲೇಖಕರು ಕಥೆಯಲ್ಲಿ ಮನಗಾಣಿಸಿದ್ದಾರೆ. ಕಥೆಯು ವಸ್ತುವಿನ ದೃಷ್ಟಿಯಿಂದ ಸಮಾಜದ ವಾಸ್ತವಿಕತೆಯನ್ನು ಆಧರಿಸಿದುದಾಗಿದೆ. ಇಲ್ಲಿನ ಕಥಾನಾಯಕ ಯೋಗಿನ್ ಮೂಲತಃ ದುರ್ಬಲ ಮನಸ್ಸಿನವನು. ಯೌವನದ ಬಿಸಿಯ ಆವೇಶದಲ್ಲಿ ಆದರ್ಶವನ್ನು ಪ್ರತಿಪಾದಿಸುವುದರ ಜೊತೆಗೆ ಕ್ರೈಸ್ತರ ಮತ ಪ್ರಚಾರದಿಂದಾಗಿ ತಲೆಕೆಡಿಸಿಕೊಂಡವನು. ಅವನ ಸ್ವಭಾವವನ್ನು ಚಿತ್ರಿಸುತ್ತ ಕತೆಗಾರರು ಹೇಳುತ್ತಾರೆ. "ಕ್ರೈಸ್ತ ಪಾದ್ರಿಗಳನ್ನು ಕ್ರೈಸ್ತಮತ ಪ್ರಚಾರಕರನ್ನು ಕಂಡರೆ ಅವನಿಗೆ ಸ್ವಲ್ಪವೂ ಆಗುತ್ತಿರಲಿಲ್ಲ. ಅವರು ಮೋಸಗಾರರೆಂದು ನಿಂದಿಸುತ್ತಿದ್ದನು. ಇದು ಅವನಲ್ಲಿ ಬೇರುಬಿಟ್ಟಿತ್ತು.

ಹಿಂದೂ ಸಮಾಜವನ್ನು ಸುಧಾರಿಸಬೇಕೆಂದೂ ಅದರ ಕುಂದುಕೊರತೆ ನ್ಯೂನತೆಗಳನ್ನು ಬೇರು ಸಹಿತ ಕೀಳಬೇಕೆಂದೂ ಕ್ರೈಸ್ತರಾದ ಹಿಂದುಗಳನ್ನು ಶುದ್ಧಮಾಡಿ ಹಿಂದಕ್ಕೆ ತೆಗೆದುಕೊಳ್ಳಬೇಕೆಂದೂ ಕ್ರೈಸ್ತಪಾದ್ರಿಗಳ ಹಾವಳಿಯನ್ನು ನಿಲ್ಲಿಸಬೇಕೆಂದೂ ಅವನ ಧ್ಯೇಯ."[6] ಇಂಥ ಆದರ್ಶಗಳನ್ನು ಮೈಗೂಡಿಸಿಕೊಂಡಿದ್ದ ಯೋಗಿನ್ ಒಬ್ಬ ಪಾದ್ರಿಯ ಹದಿಹರೆಯದ ಮಗಳ ಚೆಲುವಿಗೆ ಮಾರು ಹೋದದ್ದು ಆತನ ಬದುಕಿನ ದುರಂತವೆನ್ನಬಹುದಾಗಿದೆ. "ಉಪದೇಶ ಜಯಿಸಿದವರನ್ನು ಸೌಂದರ್ಯ ಜಯಿಸುವುದೆಂಬ ತತ್ವವನ್ನು ಪಾದ್ರಿ ಚೆನ್ನಾಗಿ ಅರಿತಿದ್ದ"[7] ಎಂಬ ಮಾತಿನಲ್ಲಿ ಕ್ರೈಸ್ತಮತ ಪ್ರಚಾರಕರ ಹುನ್ನಾರಗಳನ್ನು ತಿಳಿಯಬಹುದಾಗಿದೆ. ಅಲ್ಲದೆ ಅಂದಿನ ಸಾಮಾಜಿಕ ಬದುಕಿನ ದುರಂತವನ್ನು ಕತೆ ಧ್ವನಿಸುತ್ತದೆ. ಅಂದಿನ ನಮ್ಮ ಸಮಾಜದ ದೌರ್ಬಲ್ಯಗಳು, ಅಂಧಶ್ರದ್ಧೆಗಳು ಈ ಎಲ್ಲ ಅವಕಾಶಗಳನ್ನು ಬಳಸಿಕೊಂಡ ಕ್ರೈಸ್ತಧರ್ಮ ಪ್ರಚಾರಕರ ತಂತ್ರಗಳನ್ನು ತಿಳಿಯಬಹುದಾಗಿದೆ.

ಕಥೆಯ ಆರಂಭ ಮತ್ತು ಮುಕ್ತಾಯ ಅತ್ಯಂತ ಧ್ವನಿಪೂರ್ಣವಾಗಿ ಮೂಡಿಬಂದಿದೆ. ಎಚ್. ಜೆ. ಲಕ್ಕಪ್ಪಗೌಡರು ಕಥೆಯ ಬಗೆಗೆ ತಮ್ಮ ಅಭಿಪ್ರಾಯ ತಿಳಿಸುತ್ತ "ಕತೆಗಾರರು ಹೊರಟಿದ್ದು ಆಗುಂಬೆಯ ವರ್ಣವೈಭವದ ಸೂರ್ಯಾಸ್ತಮಯದ ಸ್ವರ್ಗೀಯ ದೃಶ್ಯವನ್ನು ನೋಡಲು. ಮಾರ್ಗಮಧ್ಯದಲ್ಲಿಯೇ ಅಂತಹ ಸೂರ್ಯತೇಜಸ್ವಿಯಾದ ಮಿತ್ರನೊಬ್ಬನ ಅಸ್ತಮಯವನ್ನು ನೋಡುತ್ತಾರೆ. ಇದು ತುಂಬಾ ಅರ್ಥಪೂರ್ಣ ಸಂಕೇತ. ಮೊದಲು ಕಂಡ ಸಹ್ಯಾದ್ರಿಪರ್ವತ ಯೋಗಿನ್ ಒಮ್ಮೆ ಏರಿನಿಂತಿದ್ದ ನೈತಿಕಾದರ್ಶದ ಎತ್ತರವನ್ನೂ ಅವನ ಮಹಾಧ್ಯೇಯವನ್ನೂ ಅಚಲ ನಿಲುವನ್ನೂ ಪ್ರತಿಮಿಸುತ್ತದೆ. ಹಾಗೆಯೇ ಕತೆಗಾರರು ಕಥಾಂತ್ಯದಲ್ಲಿ ಪಶ್ಚಿಮ ಗಗನದಲ್ಲಿ ರವಿಯು ಪರ್ವತಗಳ ಹಿಂದೆ ಇಳಿದಿಳಿದು ಹೋಗುವುದನ್ನು ಕಾಣುತ್ತಾರೆ. ಇದು ಅವರ ಗೆಳೆಯನ ಉಜ್ವಲ ವ್ಯಕ್ತಿತ್ವಕ್ಕೆ ನೈತಿಕ ಪತನಕ್ಕೆ ಹಾಗೂ ಆತ್ಮವಿನಾಶಕ್ಕೆ ಎಂತಹ ಸಶಕ್ತ ಧ್ವನಿಭರಿತ ಪ್ರತಿಮೆ !"[7] ಮೇಲಿನ ಅಭಿಪ್ರಾಯ ಕಥೆಯ ದೃಷ್ಟಿಯಿಂದ ಔಚಿತ್ಯಪೂರ್ಣವಾಗಿದೆ. ಮೆಚ್ಚುವ ಮಾತುಗಳಾಗಿವೆ. ಕಥೆಯಲ್ಲಿ ಬರುವ ಪ್ರಕೃತಿಯ ವರ್ಣನೆ, ರಚನೆಯ ಕ್ರಮ ಕುವೆಂಪು ಅವರ ಶೈಲಿಯ ವೈಶಿಷ್ಟ್ಯಕ್ಕೆ ನಿದರ್ಶನವಾಗಿದೆ. ಕುವೆಂಪು ಅವರು ಆ ಕಾಲಘಟ್ಟದ ಮಲೆನಾಡಿನ ಸಾಮಾಜಿಕ ದುರಂತವನ್ನು ಕಥೆಯಲ್ಲಿ ನಿರೂಪಿಸಿದ್ದಾರೆ.

'ಈಶ್ವರನೂ ನಕ್ಕಿರಬೇಕು' ಎಂಬ ಕತೆಯಲ್ಲಿ ಹರಕು ಕಿವಿ ಹಾಗೂ ಕುರೂಪಿಯಾದ ನಾಗರಾಜ ವಿವಾಹಕಾತರನಾಗಿ ತನ್ನ ಕುರೂಪವನ್ನು ಮರೆಸಿ ಹೆಣ್ಣಿನವರನ್ನು ಮೋಸಗೊಳಿಸಲೆತ್ನಿಸಿ ಅವರ ಯುಕ್ತಿಯ ಬಲೆಯಲ್ಲಿ ತಾನೇ ಬಿದ್ದ ಹಾಸ್ಯರಂಜಿತ ಸಂಗತಿಯನ್ನು ತಿಳಿಯಬಹುದಾಗಿದೆ. ಕುವೆಂಪು ಅವರು ವಿನೋದಕ್ಕಾಗಿಯೇ ಕಥೆಯನ್ನು ರಚಿಸಿದ್ದಾರೆ ಎಂಬುದಾಗಿ ಬಹಳಷ್ಟು ಜನ ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ. ಕಥಾವಸ್ತುವಿನ ಹಂದರ ತೀರ ಸರಳವಾದರೂ ಅದರ ಸಹಜ ವಿನೋದವಾದ ಸರಳ ಶೈಲಿ ಓದುಗರನ್ನು ನಗೆಯ ಹೊನಲಿನಲ್ಲಿ ತೇಲಿಸಿಕೊಂಡು ಹೋಗುತ್ತದೆ. ಮದುವೆಗಾಗಿ ನಾಗರಾಜ ಪಡುವ ತವಕ, ಜಾಹೀರಾತನ್ನು ಕಂಡಾಗ ಆತ ಪಡುವ ಸಂಭ್ರಮ, ಕಾರ್ಯಸಾಧನೆಗಾಗಿ ಆತ ಉಪಯೋಗಿಸುವ ಬುದ್ಧಿ, ಚಾತುರ್ಯ, ರಮ್ಯ ನಿರೂಪಣೆಯನ್ನು ಪಡೆದಿದೆ. ಅವನ ಚಟುವಟಿಕೆಗಳು ಒಂದೆಡೆ ನಗೆಯನ್ನುಕ್ಕಿಸುತ್ತಿದ್ದರೂ ಮತ್ತೊಂದೆಡೆ ಕನಿಕರವನ್ನೂ ಮೂಡಿಸುತ್ತವೆ. ಕುವೆಂಪು ಬಳಸಿರುವ ಶೈಲಿ

ಓದುಗರ ಮನದಲ್ಲಿ ನಗೆಯನ್ನುಂಟು ಮಾಡುತ್ತದೆ. ನಾಗರಾಜನು ತನ್ನ ಕುರೂಪು ಕಾಣದ ಹಾಗೆ ಫೋಟೋಗೆ ಸ್ವಲ್ಪ ಟಚ್ ಮಾಡಿಬಿಡಿ ಎಂದು ಸ್ಟುಡಿಯೋದ ವ್ಯಕ್ತಿಗೆ ತಿಳಿಸಿರುತ್ತಾನೆ. ತನ್ನ ಫೋಟೋವನ್ನು ತೆಗೆದುಕೊಂಡ ನಾಗರಾಜನು "ಸ್ವಾಮಿ ಫೋಟೊ ಬದಲಾವಣೆಯಾಗಿದೆ ಅಂತ ಕಾಣುತ್ತದೆ ಎಂದನು. ಇಲ್ಲ ಸ್ವಾಮಿ ಬದಲಾವಣೆಯಾಗಿಲ್ಲ. ಟಚ್ ಮಾಡಿ ಎಂದು ನೀವೇ ಹೇಳಿದ್ದೀರಲ್ಲ ಅದಕ್ಕೆ ಸ್ವಲ್ಪ ಚೆನ್ನಾಗಿಯೇ ಟಚ್ ಮಾಡಿದ್ದೇನೆ. ಅಂತೂ ಫೋಟೋಗೆ ಗೋಲ್ಡನ್ ಟಚ್ ಆಗಿಬಿಟ್ಟಿತ್ತು"[೨] ಇನ್ನು ಮುಂತಾದ ಮಾತುಗಳು ಓದುಗರಿಗೆ ನಗೆಯ ಬುಗ್ಗೆಯನ್ನೇ ಚಿಮ್ಮಿಸುತ್ತವೆ. ಒಬ್ಬರು ಮತ್ತೊಬ್ಬರನ್ನು ವಂಚಿಸಲೆತ್ನಿಸಿ ವಿಧಿ ವಿಲಾಸದಿಂದ ಇಬ್ಬರೂ ಮೋಸಹೋಗುವ ಪ್ರಸಂಗ ಸಹಜವಾಗಿರುವಷ್ಟೇ ಸರಸವೂ ಉಚಿತವೂ ಆಗಿದೆ. ನಾಗರಾಜನಿಗೆ ತಾನು ಲಲಿತೆಯನ್ನು ವಂಚಿಸಿದ್ದಕ್ಕಾಗಿ ಹೆಮ್ಮೆ ಸಂತೋಷಗಳೇ ಹೊರತು ಕಿಂಚಿತ್ತೂ ಪಶ್ಚಾತ್ತಾಪವಿಲ್ಲ. ಆದರೆ ಲಲಿತೆಗೆ ನಾಗರಾಜನಂಥ ಪತಿ ದೊರೆತು ಸಂತೋಷವನ್ನು ತಂದರೂ ನಿಜಸ್ಥಿತಿಯನ್ನು ತಿಳಿಸದೇ ಅವನನ್ನು ಮೋಸ ಪಡಿಸಿದ್ದು ಮನಸ್ಸಿನಲ್ಲಿ ನೋವಾಗಿ ಕಾಡುತ್ತದೆ. ಆದರೂ ಅಂತ್ಯದಲ್ಲಿ ತಮ್ಮ ತಮ್ಮ ಕುರೂಪದ ನಿಜಸ್ವರೂಪ ಪ್ರಕಟವಾದಾಗ ಪರಸ್ಪರ ಆರೋಪಿಸದೆ ಪಾಲಿಗೆ ಬಂದದ್ದು ಪಂಚಾಮೃತವೆಂದು ಭಾವಿಸಿ ಆನಂದಿಸುವಂತೆ ಕತೆಯನ್ನು ನಿರೂಪಿಸಿರುವುದು ಕತೆಗಾರರ ಜೀವನ ದೃಷ್ಟಿಯನ್ನು ತೋರಿಸುತ್ತದೆ. ಈ ಕತೆಯಲ್ಲಿ ಬರುವ ಹಾಸ್ಯ ಓದುಗರ ಮನಸ್ಸಿಗೆ ಮುದವನ್ನು ನೀಡುತ್ತದೆ.

'ಆರಾಣೆ ಮೂರು ಕಾಸು' ಕುವೆಂಪು ಅವರ ಉತ್ತಮ ಕತೆಗಳಲ್ಲಿ ಒಂದಾಗಿದೆ. ಕತೆಯ ವಸ್ತುವೂ ಸತ್ಯಕ್ಕೆ ತುಂಬ ಹತ್ತಿರವಾದದ್ದು. ನವಾಬನ ಬದುಕಿನ ಏರಿಳಿತಗಳು, ಮಾಧವರಾಯರ ಉದಾರ ಮನೋಭಾವ ಕತೆಯಲ್ಲಿ ಮನೋಜ್ಞವಾಗಿ ಮೂಡಿಬಂದಿದೆ.

ಡಾ. ಎ. ಎಸ್. ವೇಣುಗೋಪಾಲರಾವ್ ಅವರು ಕತೆಯ ಬಗೆಗೆ ತಮ್ಮ ಅಭಿಪ್ರಾಯ ತಿಳಿಸುತ್ತ "ಶ್ರೀಮಂತಿಕೆಯ ವೈಭವದಲ್ಲಿ ಮೆರೆದ ಮನೆತನಗಳು ಕಾಲಗತಿಯಿಂದ ಭಿಕ್ಷುಕರ ಮಟ್ಟಕ್ಕೆ ಇಳಿದ ಸಂಗತಿಗಳು ಭಾರತದಲ್ಲಿ ಅಪರೂಪವಲ್ಲ. ಸಿಪಾಯಿ ದಂಗೆಯ ಕಾಲ, ಶ್ರೀಮಂತರಿಂದ ಸಾಲ ಪಡೆದ ನವಾಬ ಮನೆತನಗಳು, ಇಂಗ್ಲೀಷರ ನೇರ ಆಡಳಿತ, ಅನೇಕ ಇಂಥ ಮನೆತನಗಳಿಗೆ ತಂದ ದುರ್ದೆಶೆ. ಇವುಗಳೆಲ್ಲ ಚರಿತ್ರೆಯ ವಾಸ್ತವ ಸಂಗತಿಗಳಾದುದರಿಂದ ಮನಸ್ಸಿಗೆ ಥಟ್ಟನೆ ತಟ್ಟುತ್ತವೆ."[೩] ಎಂಬ ಅವರ ಅಭಿಪ್ರಾಯವನ್ನು ಒಪ್ಪಬಹುದಾಗಿದೆ. ಕುವೆಂಪು ಅವರ ನೋಟದಲ್ಲಿ ಮಾನವ ಜೀವನ ಯಾವುದೋ ಅಗೋಚರ ಶಕ್ತಿಯ (ವಿಧಿ) ನಿಯಂತ್ರಣಕ್ಕೆ ಒಳಗಾಗುವ ಪರಿಯನ್ನು ಕಾಣಬಹುದಾಗಿದೆ. ದಿವಾನನಾಗಿದ್ದವನು ಭಿಕ್ಷುಕನಾದದ್ದು, ಕಾಸು, ಕಾಸಿಗೂ ತಿನ್ನುವ ಒಂದೊಂದು ಅಗುಳಿಗೂ ಪರದಾಡುವಂಥ ಸ್ಥಿತಿಗೆ ಬಂದದ್ದು ನಂತರ ಒಮ್ಮೆಗೇ ಪರಿಸ್ಥಿತಿ ಸುಧಾರಣೆಯಾಗಿ 'ಆರಾಣೆ ಮೂರು ಕಾಸನ್ನೂ' ಹಿಂತಿರುಗಿಸಿದ್ದಷ್ಟೇ ಅಲ್ಲ. ಸಾಲದ ದೊಡ್ಡ ಮೊತ್ತವನ್ನು ಪುನಃ ಕೊಡಲು ಒಪ್ಪಿಗೆ ನೀಡಿದ್ದು. ಹೀಗೆ ಇಲ್ಲಿನ ಅನಿರೀಕ್ಷಿತ ಘಟನೆಗಳು ಬದುಕಿನ ನಿಗೂಢತೆಯ ಬಗೆಗೆ ವಿಸ್ಮಯ ಮೂಡಿಸುತ್ತವೆ. ಕುವೆಂಪು ಪ್ರಸ್ತುತ ಕತೆಯಲ್ಲಿ ವಿಶ್ವಾಸ ಮತ್ತು ನಂಬಿಕೆಯನ್ನು ಬಾಳಿನ ಒಂದು ಮೌಲ್ಯವನ್ನಾಗಿ ಪ್ರತಿಪಾದಿಸಿದ್ದಾರೆ. "ತನಗೆ ಎಂಥ ಕಷ್ಟ ಬಂದರೂ ಭಿಕ್ಷೆ ಬೇಡಿದರೂ ಜೀವನವನ್ನು ದುರಂತ ಮಾಡಿಕೊಳ್ಳದೆ, ಧೈರ್ಯದಿಂದ ಎದುರಿಸಿ ತನಗೆ ನೆರವಾದವರನ್ನು ಮರೆಯದೆ ನೆರವಿನ

ಋಣವನ್ನು ಪೂರ್ಣ ಕೃತಜ್ಞತೆಯೊಂದಿಗೆ ತೀರಿಸುವ ಧರ್ಮಪ್ರಜ್ಞೆ ಕೃತಜ್ಞತೆ ಮೆಚ್ಚುವಂತಿದೆ. ಈ ಕತೆ ಬದುಕಿನ ಮೌಲ್ಯಗಳನ್ನು ಶೋಧಿಶುವ ಕಥೆಯಾಗಿದೆ."[೦೪] ಎಂಬುದಾಗಿ ಡಾ. ತಿಪ್ಪೇಸ್ವಾಮಿಯವರು ಅಭಿಪ್ರಾಯಪಟ್ಟಿದ್ದಾರೆ.

ಕುವೆಂಪು ಅವರ ಕಥೆಯಲ್ಲಿ ನವಾಬನ ದುಃಸ್ಥಿತಿಯನ್ನು ತಿಳಿಸುವ ಸಂದರ್ಭದಲ್ಲಿ ಬಳಸಿರುವ ಶೈಲಿ ಓದುಗರ ಮನಸ್ಸಿನಲ್ಲಿ ಕನಿಕರವನ್ನುಂಟು ಮಾಡುತ್ತದೆ. "ಮಾಧವರಾಯರ ಬಳಿ ನವಾಬ್ ಸಿಂಗನು ಬಹಳ ದೈನ್ಯದಿಂದ ಹೇಳತೊಡಗಿದನು. ಸ್ವಾಮಿ, ನಿಮ್ಮ ಮನೆತನಕ್ಕೂ ನಮ್ಮ ಮನೆತನಕ್ಕೂ ಬಹಳ ಸ್ನೇಹ. ನೀವು ಮಕ್ಕಳಾಗಿದ್ದಾಗ ನನ್ನನ್ನು ದೇವರು ಉತ್ತಮ ಸ್ಥಿತಿಯಲ್ಲಿಟ್ಟಿದ್ದ. ನೀವು ನನ್ನನ್ನು ಮರೆತಿರಬಹುದು. ನಾನು ಕಾಸಿಲ್ಲದವನಾದೆ. ಆದರೂ ನನಗಿನ್ನೂ ನಿಮ್ಮ ನೆನಪಿದೆ. ನನ್ನ ಹೆಂಡತಿ ಮಕ್ಕಳಿಗೆ ಉಡಲು ಬಟ್ಟೆಯಿಲ್ಲ, ಉಣ್ಣಲು ಅನ್ನವಿಲ್ಲ. ಮಲಗಲು ತಾವಿಲ್ಲ. ಭಿಕ್ಷೆಯಿಂದ ಕಾಲಹರಣ ಮಾಡುತ್ತಿದ್ದೇನೆ. ನೀವು ಇರುವಲ್ಲಿಗಾದರೂ ಕರೆದುಕೊಂಡು ಹೋಗಿ, ನೀವು ಹೇಳಿದ ಕೆಲಸ ಮಾಡುತ್ತೇವೆ. ನಮಗೆ ಹೊಟ್ಟೆಗಿಷ್ಟು ಹಾಕಿದರೆ ಸಾಕು."[೦೫] ಹೀಗೆ ಮಾನವ ಜೀವನದಲ್ಲಿ ಅಧಿಕಾರ ಐಶ್ವರ್ಯಗಳ ಅಸ್ಥಿರತೆಯನ್ನು ಸಾರುವಂತೆ 'ಆರಾಣೆ ಮೂರು ಕಾಸು' ಕಥೆಯಲ್ಲಿ ಬಿಂಬಿಸಲಾಗಿದೆ.

'ಯಾರು ಅರಿಯದ ವೀರ' ಕುವೆಂಪು ಅವರ ಶ್ರೇಷ್ಠ ಕಥೆಗಳಲ್ಲಿ ಒಂದಾಗಿದೆ. ಸುಬ್ಬಣ್ಣಗೌಡರ ಮನೆಯ ಆಳಾದ ಲಿಂಗಲೋಕವೆ ಅವನನ್ನು ಕಳ್ಳ ಎಂದು ದೂರ ಮಾಡಿದ್ದಾಗ ಅನ್ನವಿಟ್ಟು ಆಶ್ರಯಕೊಟ್ಟು ತನ್ನ ಒಡೆಯರ ಕುಟುಂಬವನ್ನು ತುಂಗೆಯ ಪ್ರವಾಹದಿಂದ ಪ್ರಾಣದ ಹಂಗು ತೊರೆದು ಅವರನ್ನು ರಕ್ಷಿಸಿದ ತ್ಯಾಗವೆ ಕತೆಯ ವಸ್ತು. ಈ ಕತೆಯ ಜೀವನಾಡಿ ಲಿಂಗ. ಅವನ ತ್ಯಾಗ ನಿಸ್ವಾರ್ಥ ಸೇವೆ, ಅನ್ನಕೊಟ್ಟವರ ಬಗ್ಗೆ ಇಟ್ಟುಕೊಂಡಿರುವ ಕೃತಜ್ಞತೆ, ಲಿಂಗಣ್ಣಗೌಡರ ಮಾನವೀಯ ಅಂತಃಕರಣ ಈ ಎಲ್ಲ ಸಂಗತಿಗಳು ಕತೆಯಲ್ಲಿ ಹೃದಯಸ್ಪರ್ಶಿಯಾಗಿ ಮೂಡಿಬಂದಿದೆ. ಮಾನವೀಯತೆ ಈ ಕತೆಯ ವಸ್ತುವಾಗಿದೆ.

ಲಿಂಗ ಈ ಕತೆಯ ಕೇಂದ್ರ ಬಿಂದು. ಸುಬ್ಬಣ್ಣಗೌಡರ ಮನೆಯ ಆಳು. ಬದುಕಿನ ಸುಖದಿಂದ ವಂಚಿತನಾದ ಈತ ಹಿಂದೆ ರಂಗೇನಾಯ್ಕರ ಮನೆಯ ಜೀತದಾಳಾಗಿ ದುಡಿದು, ಸಹವಾಸ ದೋಷದಿಂದ ಕುಡಿಯುವುದನ್ನು ಕಲಿತು ಅಮಲಿನಲ್ಲಿ ತನ್ನ ಒಡೆಯರ ಮಗನೊಂದಿಗೆ ಮಾಡಿದ ಮಾರಾಮಾರಿಯಿಂದಾಗಿ ಜೈಲು ಶಿಕ್ಷೆಯನ್ನು ಅನುಭವಿಸಿ ಬಂದ. ಈತನಿಗೆ ಬದುಕು ಅಸಹನೀಯವಾಗಿದೆ. ಬಡತನ ಒಂದು ಶಾಪವಾಗಿದೆ. ಈ ಬಡತನದಿಂದಾಗಿಯೇ ಮಗನೂ ಪರದೇಶಿಯಾಗಿದ್ದಾನೆ. ಈತ ಬಂಧುಬಾಂಧವರಿಂದ ದೂರವಾಗಿದ್ದಾನೆ. ಈ ಕಥೆಯಲ್ಲಿ ಜೀತದಾಳುವಿನ ಅಸಹಾಯಕತೆ, ನೋವು ಆ ಕಾಲಘಟ್ಟದ ಸಾಮಾಜಿಕ ಜೀವನ ಇವೆಲ್ಲವನ್ನು ಸಹಾನುಭೂತಿಯಿಂದ ಚಿತ್ರಿಸುವಂತೆಯೇ ಆಳು ವರ್ಗದಲ್ಲಿರುವ ಮಾನವ ಮೌಲ್ಯಗಳನ್ನು ತೆರೆದು ತೋರಿಸುತ್ತದೆ.

ಸುಬ್ಬಣ್ಣಗೌಡರ ಮನೆಯಲ್ಲಿ ಆಳಾಗಿ ಸೇರಿದ ಲಿಂಗ ತನಗೆ ಆಶ್ರಯಕೊಟ್ಟ ಒಡೆಯರ ಔದಾರ್ಯಕ್ಕೆ ಅಪಾರವಾದ ಕೃತಜ್ಞತೆಯನ್ನು ಇಟ್ಟುಕೊಂಡಿದ್ದಾನೆ. ಅವರ ಅನ್ನದ ಋಣಕ್ಕಾಗಿ ಅನುಪಮವಾದ ತ್ಯಾಗವನ್ನು ಮಾಡಿದ ಸಂಗತಿಯೆ ಈ ಕಥೆಯ ವಸ್ತು.

ಸಂಭಾಷಣಾ ಶೈಲಿಯಲ್ಲಿ ಆರಂಭವಾಗುವ ಈ ಕಥೆ ಮೊದಲಿನಿಂದ ಕೊನೆಯವರೆಗೂ ಓದುಗರ ಉತ್ಸಾಹ, ಕುತೂಹಲವನ್ನು ಹೆಚ್ಚಿಸುತ್ತದೆ. ಕುವೆಂಪು ಅವರ ಅದ್ಭುತ ಚಿತ್ರಾತ್ಮಕ ಶೈಲಿ ಕಣ್ಣಿಗೆ ಕಟ್ಟುವಂತಿದೆ. ನದಿ ತುಂಬಿ ಬಂದಾಗಿನ ಆತಂಕ. ನದಿ ನೀರು ಏರಿ ಹಿತ್ತಲ ಗೋಡೆ ಬಿದ್ದು ನೀರು ಮನೆಯ ಅಂಗಳಕ್ಕೆ ನುಗ್ಗುತ್ತಿದ್ದಾಗ ಸುಬ್ಬಣ್ಣಗೌಡರ ಮನಸ್ಥಿತಿ, ಮನೆ ಮಂದಿಯನ್ನೆಲ್ಲ ನೀರಿನಿಂದ ಪಾರು ಮಾಡಬೇಕೆಂಬ ತವಕ, ಸೋಮಕ್ಕ ಪುಟ್ಟಗಂಟಿಗಾಗಿ ಹೋಗಿ ಹಾಗೆಯೇ ಹೋದದ್ದು, ಸೀತೆ ಮತ್ತು ತಿಮ್ಮ ಎಂಬ ಮುದ್ದುಮಕ್ಕಳ ಮುಗ್ಧತೆ ಅಂತೆಯೇ ಅವರು ತೋರುವ ಪ್ರೀತಿ ಮತ್ತು ಹೃದಯವಂತಿಕೆಯನ್ನೂ ಕುವೆಂಪು ಅವರು ಕಣ್ಣಿಗೆ ಕಟ್ಟುವಂತೆ ಆಕರ್ಷಕ ಶೈಲಿಯಲ್ಲಿ ಚಿತ್ರಿಸಿದ್ದಾರೆ.

ಲಿಂಗನಿಗೆ ನೀರಿನ ಪ್ರವಾಹ ಏರಿದಾಗ ಹೇಗಾದರು ಮಾಡಿ ಒಡೆಯನ ಮನೆಯವರನ್ನು ದೋಣಿಯಲ್ಲಿ ದಡ ಸೇರಿಸುವ ತವಕ. ತನ್ನ ಪ್ರಾಣಕ್ಕಿಂತ ಅನ್ನ ಇಟ್ಟವರ ಬಗೆಗೆ ಅಪಾರ ಕಾಳಜಿ. ದೋಣಿ ಸಣ್ಣದು, ಇಬ್ಬರು ಕೂಡುವ ಜಾಗದಲ್ಲಿ ಏಳು ಜನ, ಜೊತೆಗೆ ಎರಡು ಪೆಟ್ಟಿಗೆಗಳು ಈ ಎಲ್ಲವನ್ನು ಹೇಗೆ ದಡ ಸಾಗಿಸುವುದು ಎಂದು ಯೋಚಿಸುತ್ತಿದ್ದಾಗ, ಗೌಡರು ಅವನಿಗೂ ಏರಿ ಕುಳಿತುಕೊಳ್ಳುವಂತೆ ಆಜ್ಞಾಪಿಸುತ್ತಾರೆ. ಅನಿವಾರ್ಯವಾಗಿ ದೋಣಿ ಏರಿ ಕುಳಿತ ಲಿಂಗ ಹುಟ್ಟುಹಾಕಲಾರಂಭಿಸಿದ. ನೀರು ಏರುತ್ತಲೇ ಇತ್ತು. ದೋಣಿ ಕ್ಷಣಕ್ಷಣವೂ ಮುಳುಗಿ ಹೋಗುವ ಸೂಚನೆಯನ್ನು ಕೊಡುತ್ತಿತ್ತು. "ಗೌಡರು ದೋಣಿಯಲ್ಲಿದ್ದು ಎರಡು ಬೆಲೆಯುಳ್ಳ ಪೆಟ್ಟಿಗೆಗಳನ್ನು ತೆಗೆದು ಹೊಳೆಗೆ ಎಸೆದರು. ಆದರೂ ಭಾರ ಕಡಿಮೆಯಾಗಲಿಲ್ಲ. ಎಷ್ಟು ಹೇಳಿದರೂ ಕೇಳದೆ ಹೆಂಗಸು ಮಕ್ಕಳು 'ರಾಮಾ ರಾಮಾ' ಎಂದು ಕೂಗಿ ಗೋಳಾಡುವುದನ್ನು ಬಿಡಲೇ ಇಲ್ಲ. ದಿಕ್ಕುಕೆಟ್ಟ ಹುಚ್ಚನಂತೆ ದೋಣಿ ಅಲೆಯತೊಡಗಿತು. ಒಂದು ಸಾರಿ ಅದು ಮುಳುಗುವಂತಾಗಿ ಸ್ವಲ್ಪ ನೀರೂ ಒಳಗೆ ನುಗ್ಗಿತು. ಮತ್ತೆ 'ರಾಮಾ ರಾಮಾ' ಎಂದು ಬೊಬ್ಬೆ ಹಾಕಿದರು.".[೬] ಹೀಗೆ ದೋಣಿಯಲ್ಲಿ ಕುಳಿತವರು ಕ್ಷಣಕ್ಷಣಕ್ಕೂ ಜೀವಭಯದಿಂದ ಆತಂಕಕ್ಕೆ ಒಳಗಾಗುವುದನ್ನು ತಿಳಿಯುತ್ತೇವೆ. ಇಂಥ ಕ್ಲಿಷ್ಟ ಸಂದರ್ಭದಲ್ಲಿ ಲಿಂಗನ ಹೃದಯದಲ್ಲಿ ಮಾನವೀಯತೆ, ಕೃತಜ್ಞತೆ ಮತ್ತು ಧರ್ಮಪ್ರಜ್ಞೆ ಜಾಗೃತಗೊಂಡು ತನ್ನ ಪ್ರಾಣಕ್ಕಿಂತ ದಣಿಯ ಪ್ರಾಣವೇ ಮಹತ್ವದ್ದೆನಿಸಿತು. ಕೂಡಲೇ ತನ್ನೊಬ್ಬನ ಭಾರ ಕಡಿಮೆಯಾಗುವುದರಿಂದ ದೋಣಿ ಸರಾಗವಾಗಿ ದಡ ಸೇರಬಹುದೆಂದೆಣಿಸಿ ಹೊಳೆಗೆ ಹಾರಿದ. ಮಗನ ನೆನಪಾದರೂ ಸಹ 'ರಾಮಾ ರಾಮಾ' ಎಂಬ ಆಕ್ರಂದನ ಅವನನ್ನು ಹೊಳೆಗೆ ಹಾರಿಸಿಯೇ ಬಿಟ್ಟಿತು. ಒಬ್ಬನ ಭಾರ ಕೊಂಚ ಕಡಿಮೆಯಾಗಿ ದೋಣಿ ಸರಾಗವಾಗಿ ಮುಂದೆ ಸಾಗಲಾರಂಭಿಸಿದಾಗ ಗೌಡರು ಅದನ್ನು 'ಭಗವಂತನ ದಯೆ' ಅನ್ನುತ್ತಾರೆ. ಅದು ಲಿಂಗನ ದಯೆಯಾಗಿತ್ತೆಂದು ಕುವೆಂಪು ಬರೆಯುತ್ತಾರೆ.

ಡಾ. ತಿಪ್ಪೇಸ್ವಾಮಿಯವರು ತಮ್ಮ ಅಭಿಪ್ರಾಯವನ್ನು ಸೂಚಿಸುತ್ತ "ಅಂತಸ್ತುಗಳ ಗಡಿದಾಟಿ ಮೆರೆಯುವ ಮಾನವ ಸಂಬಂಧಗಳ ಶ್ರೀಮಂತಿಕೆಯನ್ನು 'ಯಾರೂ ಅರಿಯದ ವೀರ' ಕಥೆ ಅತ್ಯಂತ ಚೇತೋಹಾರಿಯಾಗಿ ನಿರೂಪಿಸುತ್ತದೆ. ಲಿಂಗ ಕಾಣದಾದಾಗ 'ನಮ್ಮ ಮನೆಯ ಒಂದು ಬೆಳಕೇ ಹೋಯಿತು' ಎಂದು ಮರುಗುವ ಸುಬ್ಬಣ್ಣಗೌಡರ ಉದ್ಗಾರದಲ್ಲಿ ನಿರ್ಮಲ ಅಂತಃಕರಣವೊಂದರ ಮಿಡಿತವಿದೆ. ಇದೇ ಸಂಸ್ಕಾರ ಅವರ ಕುಟುಂಬದಲ್ಲೂ ಅನುರಣಿತವಾಗುವುದನ್ನು ನಾವು ಕಾಣುತ್ತೇವೆ. ಸುಬ್ಬಣ್ಣಗೌಡ, ನಾಗಮ್ಮ-ಸೀತೆ-ತಿಮ್ಮ ಇವರೆಲ್ಲ ತಮಗರಿವಿಲ್ಲದಂತೆಯೇ ನಮ್ಮ ಸಂಸ್ಕೃತಿಯ ಪ್ರತಿಬಿಂಬವಾಗಿದ್ದಾರೆ. ತನ್ನ ಸಹಜ ಸರಳ ನಡಿಗೆಯಿಂದ

'ಯಾರು ಅರಿಯದ ವೀರ' ಓದುಗರ ಮನಸ್ಸನ್ನು ಸೂರೆಗೊಳ್ಳುತ್ತದೆ. ಒಟ್ಟಿನಲ್ಲಿ ಈ ಕಥೆ ಕನ್ನಡದ ಮಹತ್ವದ ಕಥೆಗಳಲ್ಲೊಂದಾಗಿದೆ."[೧೭] ಎಂಬುದಾಗಿ ಮೆಚ್ಚುಗೆಯ ಮಾತುಗಳನ್ನಾಡಿದ್ದಾರೆ. ಅವರ ಅಭಿಪ್ರಾಯ ಕಥೆಯ ದೃಷ್ಟಿಯಿಂದ ಸಮರ್ಥವಾದುದಾಗಿದೆ. ಪ್ರಸ್ತುತ ಕಥೆಯಲ್ಲಿ ಕುವೆಂಪು ಅವರ ಮಾನವೀಯ ಮೌಲ್ಯಗಳ ಶೋಧನೆ ಸಾಮಾಜಿಕ ಕಾಳಜಿ ಮುಖ್ಯವಾಗಿ ಕಂಡುಬರುತ್ತದೆ.

ಕತೆಗಾರರ ಗೆಳೆಯರೊಬ್ಬರು ತಮ್ಮ ವಿದ್ಯಾರ್ಥಿಜೀವನದಲ್ಲಿ ನಡೆದ ಘಟನೆಯೊಂದರ ಪರಿಣಾಮವಾಗಿ ಹೋಳಿಗೆ ತಿನ್ನದಿರಲು ಶಪಥ ಮಾಡಿ, ಅದರಂತೆ ಬಾಳಿನುದ್ದಕ್ಕೂ ಅದನ್ನು ಪಾಲಿಸಿದ ಸಂಗತಿಯನ್ನು ತಿಳಿಸುವುದೆ 'ಹೋಳಿಗೆ ಪ್ರತಿಜ್ಞೆ' ಕಥೆಯ ವಸ್ತು. ತಮ್ಮ ಏಳೆಂಟನೆಯ ವರ್ಷದಲ್ಲಿ ಮಾಡಿದ ಹೋಳಿಗೆಯನ್ನು ತಿನ್ನುವುದಿಲ್ಲವೆಂಬ ಪ್ರತಿಜ್ಞೆಯನ್ನು ಇಪ್ಪತ್ತೈದನೆಯ ವಯಸ್ಸಿನವರೆಗೂ ಪಾಲಿಸಿಕೊಂಡು ಬಂದಿದ್ದಾರೆ. ಶಾಲೆಯಲ್ಲಿ ಗುಂಡಪ್ಪ ಮೇಷ್ಟರು ಕೊಟ್ಟ ಶಿಕ್ಷೆಯಿಂದ ಹೋಳಿಗೆ ತಿನ್ನುವುದಿಲ್ಲವೆಂಬ ಪ್ರತಿಜ್ಞೆಯನ್ನು ಕೈ ಗೊಳ್ಳುತ್ತಾರೆ. ಹಾಸ್ಯಕ್ಕಾಗಿಯೇ ಬರೆದ ಕತೆಯಂತಿದೆ.

"ದೊಡ್ಡವರಿಗೆ ಅಂಗಿ ಹೊಲಿಸಿಕೊಡುವುದು ದಂಡಕ್ಕೆ. ಅದರಲ್ಲಿಯೂ ಅವರ ಕೋಟುಗಳಿಗೆ ಜೇಬು ಇಡುವುದು ನಿಷ್ಪ್ರಯೋಜಕವಾದ ಅನ್ಯಾಯ. ಹುಡುಗರಾದರೆ ಜೇಬುಗಳಿಂದ ಸಂಪೂರ್ಣ ಪ್ರಯೋಜನವನ್ನು ಹೊಂದಿಯೇ ಹೊಂದುತ್ತಾರೆ."[೧೮] ಹೀಗೆ ಕಥೆ, ಹಾಸ್ಯ ಶೈಲಿಯಲ್ಲಿ ರಚನೆಯಾಗಿದೆ. ಮಕ್ಕಳು ತಮ್ಮ ಜೇಬಿನಲ್ಲಿ ತಿಂಡಿ, ಆಟದ ವಸ್ತು ಎಲ್ಲವನ್ನೂ ಒಟ್ಟಿಗೆ ತುಂಬಿಕೊಳ್ಳುವ ಸ್ವಭಾವವನ್ನು ಚಿತ್ರಿಸುತ್ತದೆ. 'ಹೋಳಿಗೆ ಪ್ರತಿಜ್ಞೆ' ಕಥೆ ಒಂದು ಹರಟೆ ಪ್ರಬಂಧದ ಮಾದರಿಯಲ್ಲಿ ರಚನೆಯಾಗಿದೆ. ಎಂಬುದಾಗಿ ಹಲವು ವಿಮರ್ಶಕರ ಅಭಿಪ್ರಾಯವಾಗಿದೆ.

'ಮಾಯದ ಮನೆ' ಕಥೆ ಹಸರಿಗೆ ತಕ್ಕಂತೆ ಮಾಯದ ಮನೆಯೇ ಎನ್ನಿಸಿದರೂ ಒಳಹೊಕ್ಕು ನೋಡಿದಾಗ ಅದರಲ್ಲಿ ಹುದುಗಿರುವ ಸತ್ಯ ವ್ಯಕ್ತವಾಗುತ್ತದೆ. ಸಕಾಲದಲ್ಲಿ ವೈದ್ಯಕೀಯ ನೆರವೀಯದೆ ವಿಧವೆಯೊಬ್ಬಳ ಮಗನ ಮರಣಕ್ಕೆ ಕಾರಣನಾದ ಡಾಖಾನಗರದ ಸುಪ್ರಸಿದ್ಧ ವೈದ್ಯ ಸುರೇಂದ್ರ ಬಾಬುವನ್ನು ದೆವ್ವಗಳು ತಮ್ಮ ಬೀಡಾದ ದಕ್ಷಿಣ ಮೋಷಂಡಿಯಲ್ಲಿನ ಮನೆಗೆ ಕರೆದೊಯ್ದು ತಕ್ಕ ಶಿಕ್ಷೆಯನ್ನು ವಿಧಿಸುವ ಕಥೆ 'ಮಾಯದ ಮನೆ'. ಕುವೆಂಪು ರಚಿಸಿರುವ ಈ ಕತೆಯಲ್ಲಿ ವೈದ್ಯರಲ್ಲಿರುವ ಹಣದ ದುರಾಸೆ, ಶೋಷಣೆ. ಅದರಿಂದ ಬಡಜನರ ಸಾವು ಮುಂತಾದ ಸಾಮಾಜಿಕ ಕಳಕಳಿಯನ್ನು ಕಾಣಬಹುದಾಗಿದೆ. ಹಣದಾಸೆಯಿಂದ ಕರ್ತವ್ಯ ಲೋಪಮಾಡಿ ಬಡಜನರ ಮರಣಕ್ಕೆ ಕಾರಣನಾದ ಲೋಭಿಯ ಕತೆಯಿದು. ವೈದ್ಯರ ವ್ಯಾಪಾರಿ ಮನೋಭಾವನೆ ಕಥೆಯ ವಸ್ತುವಾಗಿದೆ.

ವೈದ್ಯ ಸುರೇಂದ್ರಬಾಬುವಿಗೆ ವಿಧವೆಯ ಮಗನ ಸಾವಿನಿಂದಾಗಿ ಕರ್ತವ್ಯಚ್ಯುತಿ ಮಾಡಿದ ಅಪರಾಧ ಪಾಪ ಪ್ರಜ್ಞೆ ಕಾಡುತ್ತಿದೆ. "ತಾನು ಮಾತ್ರ ಫೀಜು ಕೊಟ್ಟರೆ ಬರುವನೆಂದು ಹೇಳಿ ಆಕೆಯನ್ನು ತಿರಸ್ಕರಿಸಿದ್ದು ಅವನಿಗೆ ಪಶ್ಚಾತ್ತಾಪವನ್ನುಂಟು ಮಾಡುತ್ತಿತ್ತು. ಸಂಜೆಯಲ್ಲಿ ತಾನು ಮನೆಗೆ ಬರುತ್ತಿದ್ದಾಗ ಆ ವಿಧವೆ ತನ್ನ ಮಗನ ಹೆಣದೊಡನೆ ಗೋಳಾಡುತ್ತಾ ಶ್ಮಶಾನಾಭಿಮುಖವಾಗಿ ಬಂಧುಗಳೊಡನೆ ಹೋಗುತ್ತಿದ್ದುದನ್ನು ನೋಡಿ, ತಾನು ಮಾಡಿದ್ದು ಧರ್ಮದೃಷ್ಟಿಯಿಂದ ಅನ್ಯಾಯವಾದುದೆಂದು ಚಿಂತಿಸುತ್ತಿದ್ದನು."[೧೯] ಇಷ್ಟಾದರೂ

ಈ ವೈದ್ಯನ ಮನಃ ಪರಿವರ್ತನೆಯಾಗದಿರುವುದಕ್ಕೆ ಆತನ ಹಣದ ಲೋಭವೇ ಕಾರಣವಾಗಿದ್ದು ಲೋಭ ಎಷ್ಟರ ಮಟ್ಟಿಗೆ ಮಾನವೀಯತೆಯನ್ನು ತುಳಿದು ಬಿಡುತ್ತದೆಯೆಂದರೆ ಇನ್ನೊಮ್ಮೆ ಪ್ರಸವವೇದನೆಯ ಕೇಸು ಬಂದಾಗಲೂ ನಿಷ್ಕರುಣೆಯಿಂದಲೇ ವರ್ತಿಸುತ್ತಾನೆ. ರೋಗಿಯ ಯಾತನಿಗಿಂತಲೂ ಅವರು ಕೊಡುವ ಫೀಜು ಮುಖ್ಯವಾಗುತ್ತದೆ. ರೋಗಿಗೆ ಚಿಕಿತ್ಸೆ ನೀಡಲು ಬಂದಾಗ ಆಶ್ಚರ್ಯವೆಂಬಂತೆ ಒಬ್ಬೊಬ್ಬರಾಗಿ ಎಲ್ಲರೂ ಮಾಯವಾಗುತ್ತಾರೆ. "ಅಷ್ಟರಲ್ಲಿ ಲಕ್ಷಾಂತರ ಜನರು ಒಟ್ಟಿಗೆ ವೈದ್ಯರೇ ಫೀಜು ! ವೈದ್ಯರೇ ಫೀಜು ! ಎಂದು ಕೂಗಿದ ಹಾಗಾಯಿತು. ಜೊತೆಗೆ ಅಲ್ಲಿ ಉರಿಯುತ್ತಿದ್ದ ದೀಪಗಳೂ ನಂದಿ ಹೋದವು. ಕಗ್ಗತ್ತಲು ಕವಿಯಿತು."[೨೦] ಹೀಗೆ, ವೈದ್ಯರ ಅಮಾನವೀಯ ವ್ಯವಹಾರವನ್ನು 'ಮಾಯದ ಮನೆ' ಬಹು ಅರ್ಥಪೂರ್ಣವಾಗಿ ವಿಡಂಬಿಸುತ್ತದೆ. ಇಂದಿಗೂ ವೈದ್ಯಕೀಯ ವೃತ್ತಿ ಸಂಭಾವನೆಗಿಂತ ಹೆಚ್ಚಾಗಿ ವ್ಯವಹಾರಿಕ ವೃತ್ತಿಯಾಗಿ ಪರಿಗಣಿಸಿರುವುದನ್ನು ಮನಗಾಣಬಹುದಾಗಿದೆ.

ದೆವ್ವದ ಕಾಟ ಎಂಬ ಕಥೆಯಲ್ಲಿ ಮುತ್ತಣ್ಣನೆಂಬ ಆಳು ತನ್ನ ಸ್ವಾತಂತ್ರ್ಯಕ್ಕೆ ಧಕ್ಕೆ ಬರುತ್ತದೆನ್ನುವ ಕಾರಣದಿಂದ ತನ್ನ ಧಣಿಯ ಮನೆಗೆ ತಾನೇ ಕಲ್ಲುಗಳನ್ನು ತೂರಿ 'ದೆವ್ವದ ಕಾಟ' ವೆಂಬ ಸುದ್ದಿ ಹುಟ್ಟಿಸಿ ಅವರನ್ನು ಆ ಊರಿನಿಂದ ಸಾಗುಹಾಕುವ ತಂತ್ರವನ್ನು ನಡೆಸಿ ಕೊನೆಗೆ ತಾನೇ ಸಿಕ್ಕಿಬೀಳುವುದು ಇದರ ವಸ್ತು. ದೆವ್ವದ ಕಾಟ ಕತೆ ಆರಂಭದಿಂದ ಕೊನೆಯವರೆಗೂ ಓದುಗರಲ್ಲಿ ಕುತೂಹಲವನ್ನು ಕೆರಳಿಸುತ್ತ ಸಾಗುವ ಚಿತ್ತಾಕರ್ಷಕ ಶೈಲಿಯಲ್ಲಿ ರಚನೆಯಾಗಿದೆ. ಆಶ್ರಯ ಕೊಟ್ಟವರಿಗೆ ನಂಬದವರಿಗೆ ಮೋಸ ಮಾಡುವುದೆ ಕಥೆಯ ವಸ್ತುವಾಗಿದೆ.

ಡಾ. ತಿಪ್ಪೇಸ್ವಾಮಿಯವರು 'ದೆವ್ವದ ಕಾಟ' ಕಥೆಯ ಬಗೆಗೆ "ಕುವೆಂಪು ಅವರು ಮನುಷ್ಯನ ದೊಡ್ಡತನವನ್ನು ಅಂತೆಯೇ ಸಣ್ಣತನವನ್ನೂ ಅತ್ಯಂತ ಹೃದ್ಯವಾಗಿ ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ. 'ಯಾರೂ ಅರಿಯದ ವೀರ' ಕಥೆಯಲ್ಲಿ ಲಿಂಗನ ಬಲಿದಾನ, ಧರ್ಮನಿಷ್ಠೆಯನ್ನು ಲೋಕದ ಮುಂದಿರಿಸಿದ ಕುವೆಂಪು 'ದೆವ್ವದ ಕಾಟ'ದಲ್ಲಿ ಮುತ್ತಣ್ಣನ ಮೂಲಕ ಮನುಷ್ಯನ ಲೋಭ ಹಾಗೂ ಕೃತಜ್ಞತೆಯನ್ನು ಅನಾವರಣಗೊಳಿಸಿದ್ದಾರೆ. ಈ ಎರಡೂ ಕಥೆಗಳ ನಾಯಕರಾದ ಲಿಂಗ ಮತ್ತು ಮುತ್ತಣ್ಣನ ಅಂತಸ್ತಿನಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಇಬ್ಬರೂ ಆಳುಗಳೆ ! ಈ ಇಬ್ಬರ ದಣಿಗಳೂ ಉದಾರಿಗಳೇ. ಲಿಂಗ 'ಮನೆಯ ಮಗ'ನಂತಿದ್ದರೆ ಮುತ್ತಣ್ಣ ಸಾರಥಿತನದಿಂದ ಅಮಾತ್ಯ ಪದವಿಗೇರಿದ್ದಾನೆ. ಲೇಖಕರು ಹೇಳುವಂತೆ ಮುತ್ತಣ್ಣ ಒಂದು ದೃಷ್ಟಿಯಿಂದ ನವಿಲೂರಿನ ಜಮೀನುದಾರನೇ ಆಗಿಬಿಟ್ಟ. ಆದರೆ ಇವರಿಬ್ಬರ ನಿಯತ್ತು, ಮೌಲ್ಯಗಳು ಹೇಗೆ ಭಿನ್ನವಾಗಿವೆ ಎಂಬುದನ್ನು ಈ ಎರಡು ಕಥೆಗಳಲ್ಲಿ ನೋಡಬಹುದು. ಲಿಂಗ ತನ್ನ ಯಜಮಾನನಿಗಾಗಿ ತನ್ನ ತನ್ನ ಪ್ರಾಣವನ್ನೇ ಕೊಡಲು ಹಿಂಜರಿಯುವುದಿಲ್ಲ. ಆದರೆ ಮುತ್ತಣ್ಣ ತನ್ನ ಯಜಮಾನರು ನವಿಲೂರಿನ ತಮ್ಮ ಮನೆಗೆ ಬರುತ್ತೇವೆಂದು ಹೇಳಿದಾಗ, ದೆವ್ವದ ಭೀತಿಯನ್ನು ಹಬ್ಬಿಸಿ, ತಾನೇ ಅದರ ಸೂತ್ರಧಾರನಾಗಿ ಕಾರ್ಯ ನಿರ್ವಹಿಸುವುದು, ಅಮಾನವೀಯವಷ್ಟೇ ಅಲ್ಲ, ಆಳಿನಿಂದ ನಿರೀಕ್ಷಿಸುವ ವ್ಯವಹಾರವೂ ಇದಲ್ಲ."[೨೧] ಹೀಗೆ ತಮ್ಮ ಅಭಿಪ್ರಾಯ ಸೂಚಿಸಿರುವುದು ಒಪ್ಪಬಹುದಾದ ಸಂಗತಿಯಾಗಿದೆ. ಮುತ್ತಣ್ಣನ ಸ್ವಾರ್ಥ, ಉಪಕಾರ ಸ್ಮರಣೆ ಇಲ್ಲದಿರುವುದು ಅಮಾನನವೀಯವಾಗಿ ಕಾಣುತ್ತವೆ. ರಂಗರಾಯರು ಮುತ್ತಣ್ಣನಲ್ಲಿಟ್ಟಿರುವ ಅಚಲವಾದ ನಂಬಿಕೆ, ವಿಶ್ವಾಸಗಳು ಕಾಲಿಗೆ ಪೆಟ್ಟು ಬಿದ್ದಾಗ ಅವನನ್ನು ವಿಕ್ಟೋರಿಯಾ ಆಸ್ಪತ್ರೆಗೆ ಕರೆದುಕೊಂಡು

ಹೋಗಿ ಚಿಕಿತ್ಸೆ ಮಾಡಿಸುವ ಅವರ ಉದಾರ ನಿರ್ಮಲ ಅಂತಃಕರಣಗಳ ಹಿನ್ನಲೆಯಲ್ಲಿ ಮುತ್ತಣ್ಣನ ಸ್ವಾಮಿದ್ರೋಹ ಅಮಾನುಷ ಮಟ್ಟಕ್ಕೇರುತ್ತದೆ.

'ದೆವ್ವದ ಕಾಟ'ದ ರಹಸ್ಯವನ್ನು ಹೊರಗಡೆ ಹಾಕುವಂತೆ ಉದ್ದಕ್ಕೂ ವ್ಯಂಗ್ಯದ ಮೂಲಕ ತಮ್ಮ ಸಮಾಜದ ಮೂಢನಂಬಿಕೆ ಅಂಧ ವಿಶ್ವಾಸಗಳನ್ನು ಕಥೆ ಅನಾವರಣ ಮಾಡುತ್ತ ಹೋಗುತ್ತದೆ. ಮನುಷ್ಯನ ಹಣದಾಸೆ, ಅಧಿಕಾರದಾಸೆ ಮತ್ತು ಕುತಂತ್ರವನ್ನು ನಮ್ಮ ಸಾಮಾಜಿಕ ಬದುಕಿನ ನಂಬಿಕೆ ವಿಶ್ವಾಸಗಳನ್ನು ಎಳೆಎಳೆಯಾಗಿ ವಿಡಂಬಿಸುತ್ತ ಹೋಗುತ್ತದೆ. ನೆರೆಯಿಂದ ತಪ್ಪಿಸಿಕೊಂಡು ನೆಮ್ಮದಿಯಾಗಿರಲು ನವಿಲೂರಿಗೆ ಬಂದ ರಂಗರಾಯರು ತಮಗಾದ ತೊಂದರೆಯ ನಿವಾರಣೆಗೆ ಯಾರೇನು ಹೇಳಿಯೂ ಅದನ್ನೆಲ್ಲ ನಂಬುವ ಅಂತೆಯೇ ಮಾಡುವ ಪರದಾಡುವ ಅವರ ನಿಸ್ಸಹಾಯಕರ ಪರಿಸ್ಥಿತಿ ಸಹಾನುಭೂತಿಯನ್ನುಂಟು ಮಾಡುತ್ತದೆ. ಜನರ ಮೂಢನಂಬಿಕೆ, ಮುಗ್ಧಮನಸ್ಸು ಅದನ್ನು ಸ್ವಾರ್ಥಸಾಧನೆಗೆ ಬಳಸಿಕೊಳ್ಳುವ ಜೋಯಿಸರ ಬೂಟಾಟಿಕೆ, ಮೋಸ ಇವುಗಳೆಲ್ಲ ಕತೆಯಲ್ಲಿ ಹಾಸ್ಯಶೈಲಿಯಲ್ಲಿ ಚಿತ್ರಿತವಾಗಿವೆ.

'ಶ್ರೀಮನ್ಮೂಕವಾಗಿತ್ತು' ಕುವೆಂಪು ಅವರ ಶ್ರೇಷ್ಠ ಕತೆಗಳಲ್ಲಿ ಒಂದಾಗಿದೆ. ಕರುಣರಸವೇ ಪ್ರಧಾನವಾಗಿರುವ ಕಥೆ ಮಾನವೀಯ ಅಂತಃಕರಣವನ್ನು ಕಲಕುತ್ತ ಓದುಗರನ್ನು ತನ್ಮಯಗೊಳಿಸುತ್ತದೆ. ಕಥೆಯ ವಸ್ತು ತೀರ ಸರಳ, ಸಾಮಾನ್ಯವಾದುದು. ಹಳ್ಳಿಗನ ಜಾನುವಾರಗಳ ಬದುಕನ್ನು ಕುರಿತದ್ದು. ಗ್ರಾಮ ಪರಿಸರವನ್ನು ಒಳಗೊಂಡದ್ದು. ಸಾಮಾನ್ಯತೆಯಲ್ಲಿಯೇ ಭವ್ಯತೆಯನ್ನು ಕಾಣುವ ಕುವೆಂಪು ಅವರ ವಿಶಿಷ್ಟವಾದ ಕತೆಯಿದು.

ಈ ಕತೆಯಲ್ಲಿ ಜಾನುವಾರಗಳೊಡನೆ ರೈತನ ಆತ್ಮೀಯ ಒಡನಾಟ ಮತ್ತು ಪ್ರೀತಿಯನ್ನು ಮನಕರಗುವಂತೆ ಕುವೆಂಪು ಅವರು ಚಿತ್ರಿಸಿದ್ದಾರೆ. ರೈತನ ಬದುಕಿನಲ್ಲಿ ತಮ್ಮ ಮಕ್ಕಳು ಬೇರೆಯಲ್ಲ, ತಾವುಸಾಕಿದ ಜಾನುವಾರುಗಳು ಬೇರೆಯಲ್ಲ. ಇವರೀರ್ವರ ಬದುಕಿನ ಅವಿನಾ ಸಂಬಂಧವನ್ನು ಕುರಿತು ಕಥೆಗಾರರು ಹೀಗೆ ಹೇಳಿದ್ದಾರೆ. "ಅವನು ಅವುಗಳ ಸುಖವನ್ನು ತನ್ನ ಸುಖಕ್ಕಿಂತಲೂ ಹೆಚ್ಚಾಗಿ ಬಯಸುತ್ತಾನೆ. ಅವುಗಳಿಗಾಗಿ ಅನ್ನ ನೀರನ್ನಾದರೂ ತೊರೆದು ಕೆಲಸ ಮಾಡುತ್ತಾನೆ."[23] ಹೀಗೆ ಭಾರತೀಯ ಕೃಷಿಕ ತನ್ನ ಜೀವನ ದ್ರವ್ಯವಾದ ದನಕರುಗಳ ಬಗೆಗೆ ತನ್ನ ಜೀವಕ್ಕೆ ಸಮವಾದ ವ್ಯಾಮೋಹವನ್ನು ಬೆಳೆಸಿಕೊಂಡಿರುತ್ತಾನೆ.

ಈ ಕಥೆಯಲ್ಲಿ ಬರುವ ರೈತನಾದ ರಂಗ ಬೆಳಗಿನಿಂದ ಸಂಜೆಯವರೆಗೂ ದುಡಿದು ಬಂದು ಸಾಕಾಗಿ ಊಟಕ್ಕೆ ಕುಳಿತಿದ್ದಾನೆ. ತುತ್ತನ್ನು ಮೇಲಕ್ಕೆ ಎತ್ತಬೇಕು, ಅಷ್ಟರಲ್ಲಿ ಎಮ್ಮೆಕರು ತನ್ನ ಹಸಿವನ್ನು ಕೂಗಿ ಹೇಳುತ್ತದೆ. ರಂಗ ಕೂಡಲೇ ಎದ್ದು ಕೊಟ್ಟಿಗೆಗೆ ಬಂದು ನೋಡಿದರೆ ಆ ಎಮ್ಮೆಕರು ಕರುಣರಸವೇ ಮೈವೆತ್ತಂತೆ ನಿಂತಿದೆ. ತಾಯಿಯನ್ನು ಕಾಣದೆ ಪರಿತಪಿಸುತ್ತರುವ ಆ ಎಳೆಗರುವಿನ ನಿಸ್ಸಾಹಾಯಕ ಮೂಕವೇದನೆ ಅವನ ಹೃದಯವನ್ನು ತಟ್ಟುತ್ತದೆ. ಕುವೆಂಪು ಈ ಪ್ರಸಂಗವನ್ನು ಚಿತ್ರಿಸಿರುವ ರೀತಿ ಓದುಗರ ಮನ ಮಿಡಿಯುವಂತಿದೆ. "ನೊಳಗದಲ್ಲಿ ಹಾಲುಹಾಕಿ ಕರುವಿಗೆ ಕುಡಿಸಲು ಯತ್ನಿಸಿದ. ಆದರೆ ಅವನ ಪ್ರಯತ್ನವೆಲ್ಲ ನೀರಿನಲ್ಲಿ ಹೋಮ ಮಾಡಿದ ಹಾಗಾಯಿತು. ಕರು ಒಂದು ತೊಟ್ಟು ಹಾಲನ್ನು ಕುಡಿಯಲಿಲ್ಲ. ಮುಂದೇನು ಮಾಡಬೇಕೆಂದು ಸ್ವಲ್ಪ ಯೋಚಿಸಿ, ಎಮ್ಮೆಯನ್ನು ಆಗಲೇ ಹುಡುಕಬೇಕೆಂದು

ಮನಸ್ಸು ಮಾಡಿದ. ಅವನು ಹೊರಟು ಹೋದ ಮೇಲೆ ನಾಗಿ ಆ ಹಳ್ಳಿಯ ಭೂತನಿಗೆ ಮೂರು ಕಾಟು ಸುಳಿದಿಟ್ಟು ಎಮ್ಮೆ ಸಿಕ್ಕಿದರೆ ಒಂದು ಕೋಳಿ ಕೊಡುವುದಾಗಿ ಹರಕೆ ಹೊತ್ತುಕೊಂಡಳು. [೨೩] ಈ ಕಥೆಯಲ್ಲಿ ತನ್ನ ಸಾಕು ಪ್ರಾಣಿಗಾಗಿ ಭಾರತೀಯ ರೈತ ತುಡಿಯುವುದನ್ನು ಗುರುತಿಸಬಹುದು. ರಂಗ ಎಮ್ಮೆಗಾಗಿ ಏನೆಲ್ಲ ಕಷ್ಟಪಡುತ್ತಾನೆ. ಕತ್ತಲಲ್ಲಿ ತನ್ನ ಜೀವದ ಹಂಗನ್ನೂ ತೊರೆದು, ಕಾಡುಬೆಟ್ಟಗಳಲ್ಲಿ ಸುತ್ತುತ್ತಾನೆ. ಜಿಗಣೆಗಳ ಕಾಟವನ್ನು ಸಹಿಸಿಕೊಳ್ಳುತ್ತಾನೆ. ಹಳ್ಳಿಯ ರೈತ ಮುಗ್ಧಜೀವಿ. ಹಾಗಾಗಿಯೆ ತನ್ನ ಪರಿಸರದಲ್ಲಿರುವ ದೇವರುಗಳು, ಪುರೋಹಿತರು ಎಲ್ಲರ ಬಗೆಗೆ ಭಕ್ತಿಯನ್ನು ಇರಿಸಿಕೊಂಡಿರುತ್ತಾನೆ. ರಂಗ ತನ್ನ ಎಮ್ಮೆ ಕಾಣದೆ ಇರುವುದರಿಂದ ಜೋಯಿಸರಿಂದ ಏನಾದರು ಪರಿಹಾರ ಸಿಗಬಹುದೆಂಬ ಕಾತರದಿಂದ ಹೋಗುತ್ತಾನೆ. ಕುವೆಂಪು ಅವರು ಜೋಯಿಸರ ಈ ಅಮಾನವೀಯ ಸ್ವಭಾವವನ್ನು ಅವನ ಮಾತುಗಳಲ್ಲೇ ಬಹಿರಂಗ ಪಡಿಸಿದ್ದಾರೆ." ನಿಮಗೇನು ಈಗಿನ ಕಾಲದವರಿಗೆ ಭಯ ಭಕ್ತಿ ನಯ, ನಡತೆ ಒಂದೂ ಇಲ್ಲ. ಸರದಾರರಂತೆ ಕೈ ಬೀಸಿಕೊಂಡು ಬಂದು ಬಿಡುತ್ತೀರಿ. ಹಿಂದೆ ನಮ್ಮ ಮನೆಯ ಮೆಟ್ಟಲು ಹತ್ತಬೇಕಾದರೆ ಕೈಕಾಣಿಕೆ ತಂದೇ ತರುತ್ತಿದ್ದರು."[೨೪] ರಂಗ ಜೋಯಿಸರ ಕೈ ತಪ್ಪಿಸಿಕೊಂಡು ಎಮ್ಮೆ ಇದ್ದ ಮನೆಗೆ ಬಂದ. ಇಲ್ಲಿ ಬಂದು ನೋಡಿದರೆ ನಾಗಣ್ಣಗೌಡರ ಮನೆಯಲ್ಲಿ ಆತಂಕದ ವಾತಾವರಣವಿದೆ. ಅವರ ಮಗ ವಾಸು ಖಾಯಿಲೆಯಿಂದ ಕಂಗಾಲಾಗಿದ್ದಾನೆ. ಬಾಯಿಗೆ ಬಂದಂತೆ ಬಡಬಡಿಸುತ್ತಿದ್ದಾನೆ. ಸತ್ತ ತಾಯಿಯನ್ನು ನೆನಪು ಮಾಡಿಕೊಳ್ಳುತ್ತಿದ್ದಾನೆ.

ಕುವೆಂಪು ಅವರು ಶ್ರೇಷ್ಠ ಮಾನವತಾವಾದಿಗಳು ಹಾಗಾಗಿ ಈ ಕಥೆಯಲ್ಲಿ ಪ್ರತಿ ಸನ್ನಿವೇಶವೂ ಓದುಗರ ಮನಮುಟ್ಟುವಂತೆ ಚಿತ್ರಿಸಿದ್ದಾರೆ. ವಾಸುವಿನ ಜೀವ ಉಳಿಸಲು ನಾಗಣ್ಣಗೌಡರು, ಎಮ್ಮೆ ಕರುವಿನ ಜೀವ ಉಳಿಸಲು ರಂಗ ಈ ಇಬ್ಬರೂ ಜೀವವೂ ಒಂದೊಂದು ಜೀವಿಯ ಬದುಕಿಗಾಗಿ ತಲ್ಲಣಿಸುತ್ತಿದೆ. ಹೀಗಾಗಿಯೇ ಓಬಯ್ಯಗೌಡ ರಂಗನನ್ನು ತರಾಟೆಗೆ ತೆಗೆದುಕೊಂಡರೂ ನಾಗಣ್ಣಗೌಡರು ಎಳೆಗರುವಿನ ಮತ್ತು ಮಗನ ಸ್ಥಿತಿ ಬೇರಲ್ಲವೆಂದೇ ಭಾವಿಸಿದರು. ವಾಸು ಕೂಡ "ಪಾಪ ಎಳೆಗರು! ಎಮ್ಮೆ ಹೊಡಕೊಂಡು ಹೋಗೋ ನೀನು ರಂಗಾ ಎಂದ" [೨೫] ರಂಗ ಈ ಮಾತು ಕೇಳಿ ಗದ್ಗದಿತನಾಗಿ ಅನಾಯಾಸವಾಗಿ 'ದೇವರೇ ಇವರನ್ನು ಉಳಿಸು ಎಂದು ದೇವರಲ್ಲಿ ಮೊರೆಯಿಟ್ಟ. ಮಾತಿಲ್ಲದ ಮೂಕಪಶು ತನನು ಬಿಡುಗಡೆ ಮಾಡಿಸಿದ ಒಡೆಯನಿಗೆ ಅನಂತ ಕೃತಜ್ಞತೆಯ ಧನ್ಯವಾದಗಳನ್ನು ಮನದಲ್ಲೇ ಹೇಳಿ ಅವನಿಗೆ ಗುಣವಾಗಲೆಂದು ಹೃದಯದಲ್ಲೇ ಹಾರೈಸಿತು. ಅದರ ಹಾರೈಕೆ, ಆ ಕರುವಿನ ಅಮೃತಾನಂದವಾದ ಮನದ ಹಿಗ್ಗು ವಾಸುವನ್ನು ಬದುಕಿಸಿದವು. ಆದರೆ ಅಲ್ಲಿದ್ದವರು ವಾಸುವಿನ ರೋಗ ಗುಣವಾದುದರ ಕಾರಣ ಜೋಯಿಸರ ವಿಭೂತಿ ಎಂದು ಭಾವಿಸಿದರು. ಆದರೆ ಆ ಮೂಗು ಪ್ರಾಣಿಯ ದಿವ್ಯಾನಂದದ ಆಶೀರ್ವಾದವೆ ಕಾರಣವಾಗಿತ್ತು ಎಂಬುದಾಗಿ ಭಾವಿಸಬಹುದಾಗಿದೆ. ಶೈಲಿ ಸರಳವಾಗಿದ್ದರೂ ಹೃದಯಸ್ಪರ್ಶಿಯಾದ ಕತೆಯಾಗಿದೆ.

" 'ಶ್ರೀಮನ್ಮೂಕವಾಗಿತ್ತು' ಕನ್ನಡ ಸಣ್ಣಕತೆಗಳ ಪ್ರಪಂಚದಲ್ಲೇ ಒಂದು ವಿಶಿಷ್ಟ ಕಥೆ. ತಮ್ಮದೇ ವಿಶಿಷ್ಟ ನಿಷ್ಠುರತೆ ಹಾಗೂ ವ್ಯಂಗ್ಯ, ವಿನೋದಗಳಿಂದ ಮಲೆನಾಡಿನ ಗ್ರಾಮೀಣ ಸಮಾಜವನ್ನು ಚಿತ್ರಿಸುವ ಕುವೆಂಪು ಅದರ ಒಂದು ಇಣುಕು ನೋಟವನ್ನು ಈ ಕಥೆಯಲ್ಲಿ ಒದಗಿಸುತ್ತಾರೆ. ಆದರೆ ಈ ಒಂದು

ಇಣುಕು ನೋಟವೇ ಎಷ್ಟು ಪರಿಣಾಮಕಾರಿಯಾಗಿದೆ ಎಂದರೆ ಕುವೆಂಪು ಅವರ ಕಥನ ಶಕ್ತಿಯ ಸರ್ವಸ್ವವೂ ಈ ಕಥೆಯ 'ದೂರದ ಕೆರೆಯೂರಿನಲ್ಲಿ ತನ್ನ ಮುದ್ದು ಕರುವನ್ನು ಮೂಸಿ ನೆಕ್ಕುತ್ತಿದ್ದ ಮೂಗು ಪ್ರಾಣಿಯ ಆನಂದದ ಆಶೀರ್ವಾದ ವಿಭೂತಿ ಅದನ್ನಾಲಿಸಿ ಶ್ರೀಮನ್ಮೂಕವಾಗಿತ್ತು' ಎಂಬ ಕೊನೆಯ ಸಾಲಿನಲ್ಲಿ ತಣ್ಣಗೆ ಆಸ್ಫೋಟಿಸುತ್ತದೆ. ಮಲೆನಾಡಿನ ಗ್ರಾಮಸಮಾಜದ ಎಲ್ಲ ಸ್ತರದ ಸಂಬಂಧಗಳೂ ಸೂಕ್ಷ್ಮ, ಪರಿಣಾಮಕಾರಿ ಹಾಗೂ ಪ್ರಾತಿನಿಧಿಕವಾಗಿ ಪ್ರಕಟವಾಗಿರುವ ಈ ಕಥೆಯಲ್ಲಿ ಕುವೆಂಪು ತನ್ನ ಕಂದನಿಂದ ದೂರವಾಗಿ ಹೋಗಿದ್ದ ಎಮ್ಮೆಯೊಂದು ಮತ್ತೆ ತನ್ನ ಕಂದನೊಡಗೂಡಿದಾಗ ಅನುಭವಿಸುವ ಮೂಕ ಆನಂದಾನುಭೂತಿಯನ್ನು, ಮನುಷ್ಯ ನಿರ್ಮಿತ ನಂಬಿಕೆಯ ಲೋಕದ ದುರಂತದ ಆಳವನ್ನು ಸೂಚಿಸುವ Pathos ಆಗಿ ಪರಿವರ್ತಿಸುವ ಮೂಲಕ ತಮ್ಮ ಪೂರ್ಣದೃಷ್ಟಿಯಲ್ಲಿ ಹದಗೊಂಡ ಕಲಾಕೌಶಲ್ಯವನ್ನು ಮೆರೆದು, ಕಥನವನ್ನು ಒಂದು ಹೊಸ ಎತ್ತರಕ್ಕೆ ಒಯ್ಯುತ್ತಾರೆ. ಕುವೆಂಪು ಕಥನ ಕಲೆಯ ಅಂತರಾತ್ಮವಿದು"[೨೮] ಎಂಬುದಾಗಿ ಡಿ. ಎಸ್. ನಾಗಭೂಷಣ ಅವರು ತಿಳಿಸಿದ್ದಾರೆ. ಅವರ ಅಭಿಪ್ರಾಯ ಔಚಿತ್ಯಪೂರ್ಣವಾಗಿದೆ ಹಾಗೂ ಅರ್ಥಪೂರ್ಣವಾಗಿದೆ ಎಂದು ಹೇಳಬಹುದು.

### *'ನನ್ನ ದೇವರು' ಮತ್ತು ಇತರ ಕಥೆಗಳು*

ಹದಿನೈದರ ಹರೆಯದಲ್ಲಿಯೇ ಗಂಡನನ್ನು ಕಳೆದುಕೊಂಡ ಹೆಣ್ಣೊಬ್ಬ ಮಾನಸಿಕ ಸಂಘರ್ಷವನ್ನು, ಅವಳು ಅನುಭವಿಸುವ ತುಮುಲ, ದ್ವಂದ್ವಗಳನ್ನು ಹಂತಹಂತವಾಗಿ 'ನನ್ನದೇವರು' ಕಥೆ ಚಿತ್ರಿಸುತ್ತದೆ. ವಿಧವೆಯ ಮನದ ಪಾಪ, ಪುಣ್ಯಗಳ ನಡುವಣ ಸಂಘರ್ಷ ಮತ್ತು ಆಕೆಯ ಭಾವನ ನಿರ್ಮಲ ಹೃದಯದ ಉನ್ನತ ಚಾರಿತ್ರ್ಯ ಇವೆ ಈ ಕಥೆಯ ವಸ್ತುವಾಗಿವೆ. ವಿಧವೆ ನಾದಿನಿ ಹಾಗೂ ಆಕೆಯ ಭಾವ ಈ ಕಥೆಯ ಪ್ರಧಾನ ಪಾತ್ರಗಳು. ವಿಧವೆಯಾದ ಈಕೆಯ ಹೃದಯದಲ್ಲಿ ಕಾಮನೆಗಳು ಸುಪ್ತಪ್ರಜ್ಞೆಯಲ್ಲಿ ಅತ್ಯಂತ ಕ್ರಿಯಾಶೀಲವಾಗಿದ್ದು ಅವು ಹೊರಬರಲು ತವಕಿಸುತ್ತಿದ್ದರೂ ಭಾವನಲ್ಲಿ ಪತಿಯ ಸುಖವನ್ನು ಕಾಣುವ ಹೆಬ್ಬಯಕೆಯಿಂದ ತುಡಿದರೂ ಆತನ ಸ್ಥಿತಪ್ರಜ್ಞತ್ವ ಹಾಗೂ ರಾಗರಹಿತ ವ್ಯಕ್ತಿತ್ವದ ಎದುರಿನಲ್ಲಿ ಅವು ಕಮರಿಹೋಗುತ್ತವೆ. ಭಾವ ದೇವರಾಗಿ ಬಿಡುತ್ತಾನೆ. ಸಹಜ ಕಾಮನೆಗಳು ಅಸಹಜವಾಗಿ ಕುಂಠಿತಗೊಳ್ಳುತ್ತವೆ.

ಆತ್ಮಕಥಾನಕ ಶೈಲಿಯಲ್ಲಿ ಕಥಾನಾಯಕಿಯ ಬಾಯಿಂದಲೆ ನಿರೂಪಿತವಾಗಿರುವ ಕಥೆಯ ಪ್ರಮುಖ ಪಾತ್ರವಾದ ಭಾವ ತೀರಾ ಆದರ್ಶದ ಸ್ಥಿತಪ್ರಜ್ಞೆಯ ಸಾಕಾರ ಮೂರ್ತಿ, ಲೌಕಿಕ ಬದುಕಿನ ಬಗೆಗೆ ನಿರ್ಮೋಹಿ. ವೇದ ಭಗವದ್ಗೀತೆ ಮುಂತಾದ ಧಾರ್ಮಿಕ ಗ್ರಂಥಗಳ ಅಧ್ಯಯನದಿಂದ ಮನಸ್ಸನ್ನು ಮಾಗಿಸಿಕೊಂಡವ. ಬಾಹ್ಯ ಆಚಾರ, ವಿಚಾರ, ಮಡಿ ಮುಂತಾದವನ್ನು ಒಪ್ಪದವನಾಗಿದ್ದಾನೆ. ಕಾವ್ಯ, ತತ್ವ, ತಮಾಷೆಗಳಲ್ಲಿಯು ಆಸಕ್ತಿ ಬೆಳೆಸಿಕೊಂಡಿದ್ದಾನೆ. ಹುಟ್ಟು ಸಾವುಗಳ ಗುಟ್ಟನ್ನು ಅರಿತು ತಮ್ಮ ಸತ್ತಾಗಲೂ ಕಣ್ಣೀರು ಹಾಕದವ. ಅನುಕಂಪ ಸಹಾನುಭೂತಿ ಸಹಾಯಗಳು ಅವನ ಮಾನವೀಯತೆಯ ಸಂಕೇತಗಳಾಗಿವೆ. ನಾದಿನಿಯ ಮನೋಗತ ಅರಿವಾದರೂ ಅದಕ್ಕೆ ಆಸ್ಪದ ಕೊಡದೆ ಆಕೆಯನ್ನು ಸರ್ವದಾ ಸರಳ ಮುಗ್ಧ ಮಗುವಿನಂತೆ ಅಪಾರ ಸಹನೆ ಕರುಣೆಗಳಿಂದ ನಡೆಸಿಕೊಂಡು ಅವಳಲ್ಲಿ ಜ್ಞಾನದೀವಿಗೆಯನ್ನು ಹಚ್ಚಲು ಯತ್ನಿಸಿ ಅವಳ ಮನಃಪರಿವರ್ತನೆಗೆ

ಪ್ರಯತ್ನಿಸುತ್ತಾನೆ. ಅವನದು ಪರಿಶುದ್ಧವಾದ ಬ್ರಹ್ಮಚರ್ಯ, ಪವಿತ್ರವಾದ ಆದರ್ಶ ಎನ್ನುವುದನ್ನು ಸ್ಪಷ್ಟಪಡಿಸಿ ಅವನ ವ್ಯಕ್ತಿತ್ವವನ್ನು ಔನ್ನತ್ಯಕ್ಕೇರಿಸಲಾಗಿದೆ.

ಆದರೆ ಭಾವನ ಪಾತ್ರಕ್ಕೆ ತದ್ವಿರುದ್ಧವಾದದ್ದು ನಾದಿನಿಯ ಪಾತ್ರ. ಅತ್ಯಂತ ಕಿರಿ ವಯಸ್ಸಿನಲ್ಲಿ ಪತಿಯನ್ನು ಕಳೆದುಕೊಂಡ ಈಕೆ ವಯಸ್ಸಿಗೆ ಸಹಜವಾದ ಕಾಮನೆಗಳನ್ನು ಹೊಂದಿರುವ ಹೆಣ್ಣು. ತನ್ನ ಭಾವನ ವ್ಯಕ್ತಿತ್ವದ ಸೆಳೆತಕ್ಕೆ ಆಕರ್ಷಿತಗೊಂಡು. ಆತನಲ್ಲೇ ತನ್ನ ಪತಿಯ ಸುಖವನು ಕಾಣಲು ಪ್ರಯತ್ನಿಸಿ ಹಿಮ್ಮೆಟ್ಟಿಸಿದವಳು. ತನ್ನ ಭಾವನ ಸಹಚರ್ಯ ಹೆಚ್ಚಿದಂತೆಲ್ಲಾ ಅವನ ರೂಪಗುಣಗಳಿಗೆ ಆಕೆ ಮಾರುಹೋದಳು. ತನ್ನ ಮನದಲ್ಲಿ ಸುಪ್ತವಾಗಿದ್ದ ಪರಿತಪಿಸುತ್ತಿದ್ದ ಅದುಮಿದ ಬಯಕೆಗಳು. ವಿಜೃಂಭಿಸಿದವು. ಸಂಪ್ರದಾಯಸ್ಥ ಸಮಾಜದ ಹೆಣ್ಣಿನ ಅಂತರಂಗದ ತಾಕಲಾಟವನ್ನು ಕಥೆಗಾರರು ಸಮರ್ಪಕವಾಗಿ ಚಿತ್ರಿಸಿದ್ದಾರೆ. "ಮನಸ್ಸು ಹುಚ್ಚು ಹುಚ್ಚಾಗಿತ್ತು. ವಿವೇಕ ಅವಿವೇಕ, ಮಾನ ಅಪಮಾನ, ಪಾಪ ಪುಣ್ಯ, ಯಾವುದರ ಗೊಡವೆಯೂ ಅದಕ್ಕೆ ಬೆಳಕಾಗಿರಲಿಲ್ಲ. ಕಡುಬೇಸಗೆಯ ಸುಡುಬಿಸಿಲಲ್ಲಿ ಒಣಗಿದ ಬಿದಿರುಮಳೆಗೆ ಬೆಂಕಿ ಇದ್ದಂತೆ ನನ್ನ ಚಿತ್ತದಲ್ಲಿ ರಾಗೋದ್ರೇಕವು ಭೀಷಣವಾಗಿತ್ತು."[೨] ಹರೆಯದ ಹೆಣ್ಣೊಬ್ಬಳ ಒಲವಿನ ಸಹಜಭಾವನೆಗಳನ್ನು ಇಲ್ಲಿ ಕಾಣಬಹುದಾಗಿದೆ. ಆ ಕಾಲ ಘಟ್ಟದಲ್ಲಿ ವಿಧವೆಯಾದ ಹೆಣ್ಣು ಮರುಮದುವೆಯಾಗುವುದನ್ನು ಸಂಪ್ರದಾಯ ಬದ್ಧವಾದ ಸಮಾಜ ಒಪ್ಪುತ್ತಿರಲಿಲ್ಲ. ಅಲ್ಲದೆ ಮದುವೆಯಾದ ಹೆಣ್ಣು ಪರಪುರುಷನ ಸಂಗವನ್ನು ಬಯಸುವುದು ಸಮಾಜದ ದೃಷ್ಟಿಯಿಂದ ಅನೈತಿಕವಾದುದು. ಹಾಗಾಗಿಯೆ ಆಕೆಗೆ ಪಾಪಪ್ರಜ್ಞೆಕಾಡಿದೆ. ತತ್‌ಕ್ಷಣವೇ ಗತಿಸಿದ ಪತಿಯ ನೆನಪು ಭುಗ್ಗೆಂದು ಅಂತರಾಳದಲ್ಲಿ ನಿಮಿರಿ ನಿಲ್ಲುತ್ತದೆ. ಆ ಸ್ಮರಣೆಯಿಂದಲೇ ಸುಪ್ತ ಪ್ರಜ್ಞೆಯಲ್ಲಿ ಹುದುಗಿದ್ದ ಪತಿಯ ಚಿತ್ರದಿಂದಲೇ ಭಾವನೆ ಪತಿಯಾಗಿ ಕಾಣಿಸುತ್ತಾನೆ. ತನ್ನ ದುಷ್ಟಕಾಮನೆಗಳಿಗೆ ಬಿದ್ದ ಹೊಡೆತಕ್ಕೆ ತತ್ತರಿಸಿ ಆಕೆ ಮೂರ್ಛೆ ಹೋಗುತ್ತಾಳೆ. ಕಡೆಗೂ ಕದಡಿದ ಕೊಳ ತಿಳಿಯಾಗುತ್ತದೆ. ಸೀತೆ, ಸಾವಿತ್ರಿಯರ ಕಥೆಗಳನ್ನು ಓದುವುದರ ಮೂಲಕ ಬೆಳಗಿನ ಭಾವನೆಗಳನ್ನು ಹತ್ತಿಕ್ಕಿದಂತೆ ಅಭಿನಯಿಸಿದರೂ ಅಂತರಂಗದ ಕಾಮನೆಗಳನ್ನು ಹತ್ತಿಕ್ಕುವುದು ಅಷ್ಟು ಸುಲಭವಲ್ಲವೆಂಬುದನ್ನು ಕುವೆಂಪು ಅವರು ಪ್ರಸ್ತುತ ಕಥೆಯಲ್ಲಿ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಹರೆಯದ ಹೆಣ್ಣಿನ ಅಂತರಂಗದ ಕಾಮನೆಗಳ ಮಿಡಿತ, ಸಂಪ್ರದಾಯಬದ್ಧ ಸಮಾಜದ ಆವರಣವನ್ನ ದಾಟಿ ಹೋಗಲಾರದು. ಅಳಕು, ಹೆಣ್ಣಿನ ಮನದಾಳದ ತಾಕಲಾಟ ಈ ಎಲ್ಲಾ ವಿಚಾರಗಳು ಕಥೆಯಲ್ಲಿ ಅಂದಿನ ಸಮಾಜದ ವಾಸ್ತವಿಕತೆಗೆ ಅನುಸಾರವಾಗಿ ವ್ಯಕ್ತವಾಗಿವೆ.

ನವೋದಯ ಸಾಹಿತ್ಯದ ಮೊದಲ ಕಾಲಘಟ್ಟದಲ್ಲಿಯ ಜೀತಪದ್ಧತಿ, ದಲಿತರ ಅಸಹಾಯಕತೆ, ಬಡತನ ಇಂತಹ ಅಮಾನವೀಯ ಶೋಷಣೆಯ ವಿರುದ್ಧ ಗಟ್ಟಿಧ್ವನಿ ಎತ್ತಿದವರು, ಅವುಗಳನ್ನು ತೀಕ್ಷ್ಣವಾಗಿ ವಿರೋಧಿಸಿದವರು ಕುವೆಂಪು ಅವರು. 'ಸಾಲದ ಮಗು' ಕತೆಯ ವಸ್ತು ಜೀತಪದ್ಧತಿಯಿಂದ ಶೋಷಣೆಗೆ ಒಳಗಾಗಿ ಬಾಳಿನಲ್ಲಿ ದುರಂತವನ್ನು ಕಾಣುವ ಬಾಲಕ ಸುಬ್ಬನ ವಿಚಾರವಾಗಿದೆ. ಈ ಕತೆಯಲ್ಲಿ ದೈನ್ಯತೆ-ಕ್ರೌರ್ಯಗಳ ಮುಖಾಮುಖಿ ಹಾಗೂ ಜೀತಪದ್ಧತಿಯ ದಾರುಣತೆಯನ್ನು ಕರುಳು ಮಿಡಿಯುವ ರೀತಿಯಲ್ಲಿ ಚಿತ್ರಿಸಲಾಗಿದೆ. ಹೃದಯಹೀನ ಶ್ರೀಮಂತರು ಬಡವರನ್ನು ಅಮಾನುಷವಾಗಿ ಶೋಷಣೆಗೆ ಗುರಿ ಮಾಡುವ

ದಾರುಣ ಚಿತ್ರವನ್ನು ಲೇಖಕರು ತುಂಬಾ ಶಕ್ತಿಯುತವಾಗಿ ತಿಳಿಸಿದ್ದಾರೆ. ಬಡವರ ಬಗ್ಗೆ ಶೋಷಿತರ ಬಗ್ಗೆ ಕಥೆಗಾರರಿಗಿರುವ ಸಾಮಾಜಿಕ ಕಾಳಜಿ ಹಾಗೂ ಸಹಾನುಭೂತಿಯನ್ನು ಕಾಣಬಹುದು.

ಕಥೆಯ ಆರಂಭದಲ್ಲಿ ಮಲೆನಾಡಿನ ಮಳೆಗಾಲದ ರೌದ್ರಮಯ ಪ್ರಕೃತಿಯ ವಾತಾವರಣವನ್ನು ಕತೆಗಾರರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. "ಒಂದೊಂದು ಸಾರಿ ಇರುಳಿನಲ್ಲಿ ಗುಟ್ಟನ್ನು ತಿಳಿಯಲೋಸುಗ ಹಗಲು ಇಣುಕಿತೋ ಎಂಬಂತೆ ಬೆಳ್ಳಿಮಿಂಚು ಮುಗಿಲುಗಳು ಸಂದಿಯಲ್ಲೆ ನಾಗರಹಾವಿನ ನಾಲಿಗೆಯಂತೆ ಚುರುಚುರುಗುಟ್ಟಿ ಹೊಳೆದು ಕಣ್ಮರೆಯಾಗುತ್ತಿತ್ತು. ಜಗತ್ತು ನಾದಮಯ, ತಿಮಿರಮಯ, ವರ್ಷಮಯವಾಗಿತ್ತು".[೨೮] ಮಳೆಗಾಲದ ಭೀಷಣವಾದ ದೃಶ್ಯವನ್ನು ಅಷ್ಟೇ ಗಂಭೀರವಾದ ಶೈಲಿಯಲ್ಲಿ ಕುವೆಂಪು ಚಿತ್ರಿಸಿದ್ದಾರೆ.

ಸುಬ್ಬ ಎಂಟು ಹತ್ತು ವರ್ಷದ ಹುಡುಗ. ಅವನು ಎರಡು ವರ್ಷದವನಿದ್ದಾಗಲೆ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾಗಿದ್ದನು. ನಂತರದ ದಿನಗಳಲ್ಲಿ ಅವನ ತಂದೆ ರಂಗ ರೇಷ್ಮೆ ಖಾಯಿಲೆಯಿಂದ ತೀರಿಹೋಗುತ್ತಾನೆ. ಅವನ ತಂದೆ ಗೌಡರಲ್ಲಿ ಮಾಡಿದ್ದ ಮುನ್ನೂರು ರೂಪಾಯಿ ಸಾಲಕ್ಕೆ ಗೌಡರು ಸುಬ್ಬನನ್ನು ಜೀತಕ್ಕಿಟ್ಟುಕೊಂಡರು. ತಂದೆ ತಾಯಿಯ ವಾತ್ಸಲ್ಯದಲ್ಲಿ ಬೆಳೆಯಬೇಕಾಗಿದ್ದ ಸುಬ್ಬ ಗೌಡರ ದಯಾಹೀನ ಕ್ರೌರ್ಯದ ಗಾಣಕ್ಕೆ ಸಿಕ್ಕು ಸಿಪ್ಪೆಯಾಗಿ ಕೃಶವಾಗಿ ಹೋಗಿದ್ದನು. ಗೌಡರು ಅಬ್ಬರಿಸಿ ಬೆತ್ತದಿಂದ ಥಳಿಸಿದರಲ್ಲದೆ ಕಾರ್ಗಾಲದ ಭಯಂಕರ ಜಡಿಮಳೆಯಲ್ಲಿ ಗದ್ದೆಯಲ್ಲಿ ಹಾಕಿದ್ದ ಕೂಣಿಯ ಮೀನನ್ನು ತರಲು ಸುಬ್ಬನನ್ನು ಕಳುಹಿಸಿದರು. ಮಳೆಗಾಲದ ಭಯಂಕರ ಕಗ್ಗತ್ತಲೆಯಲ್ಲಿ ಸಿಡಿಲುಗುಡುಗುಗಳ ಪ್ರಳಯತಾಂಡವದಲ್ಲಿ ಸುಬ್ಬ ಲಾಟೀನು ಹಿಡಿದುಕೊಂಡು ಗದ್ದೆ ಬದುವಿನಲ್ಲಿ ಹೋಗುತ್ತಿರುವಾಗ ಕೆಸರಿನಿಂದ ಜಾರಿ ಬಿದ್ದು ಲಾಟೀನು ಹೊಡೆದು ಹೋಗುತ್ತದೆ. ಲಾಟೀನು ಒಡೆದುದಕ್ಕೆ ಗದ್ದೆಯಂಚಿನಲ್ಲಿ ಆತ ಕುಳಿತು ಬಿಕ್ಕಿಬಿಕ್ಕಿ ಅಳುವುದನ್ನು ಕಂಡಾಗ ಎಂಥವರ ಹೃದಯವು ನೀರಾಗುತ್ತದೆ. ಲಾಟೀನು ಹೊಡೆದು ಹೋದುದರಿಂದ ಗೌಡರು ಸುಮ್ಮನೆ ಬಿಡುವುದಿಲ್ಲವೆಂಬ ಭಯದಿಂದ ಆ ಬಾಲಕ ರೋದಿಸುತ್ತಾನೆ. ಸುಬ್ಬ ಕತ್ತಲೆಯಲ್ಲಿಯೆ ಕೂಣಿಯ ಬಳಿ ಬಂದು ಅದನ್ನು ಮೇಲೆತ್ತಿದ್ದಾಗ ಅದರೊಳಗಿದ್ದ ಕೃಷ್ಣ ಸರ್ಪ ಅವನನ್ನು ಕಚ್ಚಿದಾಗ ವಿಷವೇರಿ ಸಾಯುತ್ತಾನೆ. ಗೌಡರ ಕ್ರೌರ್ಯದಿಂದ ತಬ್ಬಲಿ ಬಾಲಕ ಸುಬ್ಬ ಅಸುನೀಗುತ್ತಾನೆ. ಸತ್ತು ಬಿದ್ದ ಸುಬ್ಬನನ್ನ ಬೆಳಗ್ಗೆ ಕಂಡ ಗೌಡರು ನಿಡುಸುಯ್ಯುತ್ತಾರೆ. ಅವರು ನಿಡುಸುಯ್ದುದ್ದು ಬಡಪಾಯಿ ಸುಬ್ಬ ವಿನಾಕಾರಣ ಸತ್ತು ಹೋದನಲ್ಲ ಎಂಬ ಕನಿಕರದಿಂದಲ್ಲ. ಸುಬ್ಬನ ತಂದೆಗೆ ತಾವು ಕೊಟ್ಟ ಮುನ್ನೂರು ರೂಪಾಯಿ ದಂಡವಾಯಿತಲ್ಲ ಎಂದು. ತಮಗೆ ಮೀನು ಸಿಕ್ಕಲಿಲ್ಲವಲ್ಲ ಎಂದು. ಮಾನವೀಯತೆ ಇಲ್ಲದ ಗೌಡರ ಈ ಪಾತ್ರ ನಮ್ಮ ಸಮಾಜದ ಹೃದಯಹೀನ ಶ್ರೀಮಂತರ ಶೋಷಣೆಯ ಪ್ರತೀಕವಾಗಿದೆ. ಪ್ರಸ್ತುತ ಕತೆಯಲ್ಲಿ ಬಡವರ ಬಗೆಗೆ ತುಳಿತಕ್ಕೆ ಒಳಗಾದವರ ಬಗೆಗೆ ಕಥೆಗಾರರಿಗಿರುವ ಸಾಮಾಜಿಕ ಕಾಳಜಿಯನ್ನು ಕಾಣಬಹುದಾಗಿದೆ.

'ಆದರ್ಶಸಾಧನೆ' ಆದರ್ಶ ಪ್ರಿಯನಾದ ಆದರೆ ದೃಢಮನಸ್ಕನಲ್ಲದ ತರುಣನೋರ್ವನ ಕಥೆ. ಉತ್ತಮ ಪುರುಷದಲ್ಲಿ ಹಾಸ್ಯ ಶೈಲಿಯಲ್ಲಿ ಕಥೆ ಸಾಗುತ್ತದೆ. ಈ ಕಥೆಯ ನಾಯಕ ಸಂನ್ಯಾಸದ ಕನಸು ಕಟ್ಟಿದವನು. ಸಮಾಜ ಸೇವೆಯ ಉತ್ಸಾಹದಲ್ಲಿದ್ದವನು. ಬದುಕಿನ ವಾಸ್ತವತೆ ಇದಿರಾದಾಗ ತನ್ನ ಸಿದ್ಧಾಂತ ಹಾಗೂ ಆದರ್ಶಗಳನ್ನು ಕೈ ಬಿಡಲು ನೆಪಗಳನ್ನು ಹುಡುಕುತ್ತ, ಆ ಮೂಲಕ ತನಗೆ

ತಾನೆ ಸಮರ್ಥನೆ ನೀಡಲು ಮುಂದಾಗುತ್ತಾನೆ. ದುರ್ಬಲ ಮನಸ್ಸಿನ ಯುವಕನಾದ್ದರಿಂದ ತನ್ನ ಆದರ್ಶಗಳ ಬಗ್ಗೆ ಗಟ್ಟಿತನವನ್ನು ಉಳಿಸಿಕೊಳ್ಳದೆ ಸೋಲುತ್ತಾನೆ. ಬದುಕಿನಲ್ಲಿ ಆದರ್ಶ ಕನಸು ಕಾಣುವುದಕ್ಕೆ ಚೆನ್ನಾಗಿರುತ್ತದೆ. ಆದರೆ ವಾಸ್ತವಿಕತೆಯೆ ಬೇರೆ ಎಂಬ ಸತ್ಯವನ್ನು ಕಥೆಗಾರರು ತಿಳಿಸಿರುವಂತಿದೆ. ಆದರ್ಶ ಸಂನ್ಯಾಸಿಯಾಗಬೇಕೆಂದು ಬಯಸಿದವನು ರೋಹಿಣಿಯ ಮುದ್ದು ಮುಖ ಕಾಣುತ್ತಿದ್ದಂತೆ ಆದರ್ಶ ಗೃಹಸ್ಥನಾಗಲು ಬಯಸುತ್ತಾನೆ. ರೋಹಿಣಿ ಮೃತಳಾದಾಗ ಎಂದೆಂದಿಗೂ ಇನ್ನು ಮುಂದೆ ವಿವಾಹವಾಗುವುದಿಲ್ಲವೆಂದು ನಿರ್ಧಾರ ಮಾಡಿದವನು, ರೋಹಿಣಿಯ ತಂಗಿಯಾದ ಸೀತೆಯ ಬಗ್ಗೆ ಮೋಹಗೊಳ್ಳುತ್ತಾನೆ. ಅದಕ್ಕೆ ತನ್ನದೇ ಆದ ಸಮರ್ಥನೆ ನೀಡುತ್ತಾನೆ. "ಅಕ್ಕ ತಂಗಿಯರಿಗೆ ದೇಹ ಬೇರಾದರೂ ಆತ್ಮ ಒಂದಲ್ಲವೆ ? ಎರಡನೆ ಮದುವೆ ಮಾಡಿಕೊಂಡರೆ ತಾನೆ ಏನು ? ಆದರ್ಶಜೀವಿಯಾಗಿರಲಾಗುವುದಿಲ್ಲವೆ."[೨೯] ಹೀಗೆ ತಾಕಲಾಟಕ್ಕೆ ಒಳಗಾದವನು ಯಾವ ಆದರ್ಶಸಾಧನೆಗೂ ಈತ ಶ್ರದ್ಧೆ, ಪ್ರಾಮಾಣಿಕ ಪ್ರಯತ್ನ ನಡೆಸುವುದಿಲ್ಲ. ಇದಕ್ಕೆ ಅವನ ಮನಸ್ಸಿನ ಚಂಚಲತೆಯೆ ಕಾರಣ. ಈ ಕತೆಯಲ್ಲಿ ಬರುವ ಪಾತ್ರದ ಮೂಲಕ ಲೋಕದ ಬಹುಪಾಲು ಜನರ ಮಾನಸಿಕ ತೊಳಲಾಟವನ್ನು ಲೇಖಕರು ತಿಳಿಸಿದ್ದಾರೆ. ಹೀಗೆ ಚಂಚಲ ಮನಸ್ಸಿನ ವ್ಯಕ್ತಿಯೊಬ್ಬನ ಹುಡುಗು ಆದರ್ಶದ ಭಾವನೆಗಳನ್ನು ಕತೆಗಾರರು ರಂಜನೀಯವಾಗಿ, ಸ್ವಾರಸ್ಯವಾಗಿ, ಹಾಸ್ಯಪೂರ್ಣ ಶೈಲಿಯಲ್ಲಿ ನಿರೂಪಿಸಿದ್ದಾರೆ.

'ಔದಾರ್ಯ ಕಥೆ' ಡೇವಿಡ್ ಮಾಸ್ಟರ್ ಬದುಕಿನ ದುರಂತವನ್ನು ಒಳಗೊಂಡಿದೆ. ಅತಿಯಾದ ಔದಾರ್ಯದಿಂದ ಬದುಕು ಹಸನುಗೊಳ್ಳುವುದರ ಬದಲು ನಾಶವಾಗುತ್ತದೆ ಎಂಬುದನ್ನು ಕಥೆಯಲ್ಲಿ ಸೂಚ್ಯವಾಗಿ ತಿಳಿಸಲಾಗಿದೆ. ಕಥೆಯಲ್ಲಿ ಬರುವ ಪ್ರಕೃತಿ ವರ್ಣನೆ ಕುವೆಂಪು ಅವರ ನಿಸರ್ಗ ಪ್ರೀತಿಯನ್ನು ತೋರಿಸುತ್ತದೆ.

ಒಂದು ಸಂಜೆ ಅಮಲ್ದಾರರು ತುಂಗಾನದಿಯ ರಾಮತೀರ್ಥದ ಬಳಿ ಮಂಟಪದ ಬಂಡೆಯ ಮೇಲೆ ಕುಳಿತು ಬೆಳದಿಂಗಳ ಸೌಂದರ್ಯವನ್ನು ಆಸ್ವಾದಿಸುತ್ತಿದ್ದಾಗ ಡೇವಿಡ್‌ಮಾಸ್ತರು ಬಂದು ತಮ್ಮ ಬಾಳಿನ ದುರಂತ ಕತೆಯನ್ನು ಹೇಳುತ್ತಾರೆ. ಹಿರಿಯ ಮಡದಿಯನ್ನು ಕಳೆದುಕೊಂಡು ಅವರು ಪಡುವ ಯಾತನೆ ಅಪಾರವಾದುದು. ಮಗುವಿಗಾಗಿ ಮರುಮದುವೆಯಾಗುತ್ತಾರೆ. ಆಕೆ ಮೊದಮೊದಲು ಪ್ರೀತಿಯಿಂದಿದ್ದವಳು, ನಂತರದ ದಿನಗಳಲ್ಲಿ ಅವಿಶ್ವಾಸ, ವಿರಸಗಳು ಬೆಳೆಯುತ್ತ ಹೋದವು. ಸಂಸಾರ ನಾಶವಾಯಿತು. ಆಕೆ ಅನ್ಯಪುರುಷನೊಬ್ಬನಲ್ಲಿ ಅನುರಕ್ತವಾಗಿದ್ದು, ಡೇವಿಡ್ ಮಾಸ್ತರು ತಿಳಿದೂ ತಿಳಿದೂ ಸಾಗರ ಸದೃಶ ಔದಾರ್ಯದಿಂದ ಕ್ಷಮಿಸುತ್ತಾರೆ. ಮಗುವಿನ ಬಗೆಗೆ ತಾಯಿಯ ಔದಾಸೀನ್ಯ ಬೆಳೆದು ಅದು ಸತ್ತು ಹೋಯಿತು. ದಾರುಣ ಏಕಾಕಿತನ, ಪ್ರಿಯಪತ್ನಿಯ ಸಾವು, ಮುಗ್ಧ ಮಗುವಿನ ಮರಣ ಇವುಗಳಿಂದ ನಿರಾಶರಾಗಿ ಡೇವಿಡ್ ಮಾಸ್ತರ ಮನಸ್ಸು ಆತ್ಮಹತ್ಯೆಗೆ ಧಾವಿಸಿತು. ತನ್ನ ಕೈ ಹಿಡಿದ ಹೆಂಡತಿಯೇ ಅನ್ಯಪುರುಷನೊಬ್ಬನಲ್ಲಿ ಅನುರಕ್ತಳಾಗಿರುವುದನ್ನು ತಿಳಿದು ಕ್ಷಮಿಸುವ ಔದಾರ್ಯ, ಮಗುವು ಕಣ್ಮುಚ್ಚಿದಾಗ ಹೆಂಡತಿಯನ್ನು ಶಿಕ್ಷಿಸಲಿಲ್ಲ. ಅಲ್ಲಿಯೂ ಔದಾರ್ಯ. ಆತ್ಮಹತ್ಯೆ ಮಾಡಿಕೊಳ್ಳುವಾಗಲೂ ಆಕೆಯ ಮೇಲೆ ಯಾವ ಆರೋಪಣೆಯನ್ನೂ ಮಾಡದೆ ಔದಾರ್ಯ ತೋರಿದರು. ಹೀಗೆ ಡೇವಿಡ್ ಮಾಸ್ತರು ತೋರಿಸುವ

ಔದಾರ್ಯದ ಬಗ್ಗೆ ಅನುಕಂಪ ಉಂಟಾಗುತ್ತದೆ. ಸಾಂಸಾರಿಕ ವಿರಸ, ಅನುಭವಿಸಿದ ನೋವು ಡೇವಿಡ್ ಮಾಸ್ತರ ಸಾವಿಗೆ ಕಾರಣವಾಗುತ್ತದೆ. ತುಂಗಾ ನದಿಯ ಬಂಡೆಯ ಮೇಲೆ ಕುಳಿತು ಹುಣ್ಣಿಮೆ ಚಂದ್ರನ ಸೊಬಗನ್ನು ಸವಿಯುತ್ತಾ ಭಾವಪೂರ್ಣವಾದ ವಿಚಾರ ತರಂಗಗಳಲ್ಲಿ ತೇಲುತ್ತ ಕುಳತಿದ್ದವರಿಗೆ, ಡೇವಿಡ್ ಮಾಸ್ತರ ವಿಚಾರ ಕೇಳಿದ ನಂತರ ಅದೇ ಸೌಂದರ್ಯ ಕಡಿದು ಓಡುವ ನಾಗರನಂತೆ ಭಯಂಕರವಾಗಿ ತೋರುತ್ತದೆ.

'ಗಂಟು ಅಥವಾ ಗುಪ್ತಧನ' ಗ್ರಾಮೀಣ ಜನರ ಮೂಢನಂಬಿಕೆ, ಅದನ್ನು ದುರುಪಯೋಗ ಪಡಿಸಿಕೊಳ್ಳುವ ಶೋಷಕರ ವಂಚನೆಯನ್ನು ಕುರಿತಾದ ವಸ್ತುವನ್ನು ಒಳಗೊಂಡಿದೆ. ವಸ್ತುವಿನ ದೃಷ್ಟಿಯಿಂದ ವಿಶಿಷ್ಟವಾದ ಕಥೆ. ಇಂದಿಗೂ ನಮ್ಮ ಸಮಾಜದಲ್ಲಿ ಸಾಕಷ್ಟು ಜನ ಭೂಮಿಯಲ್ಲಿ ಹೂತಿಟ್ಟಿರುವ ನಿಧಿಯ ಬಗ್ಗೆ ಭ್ರಮೆ ಮತ್ತು ದುರಾಸೆಯನ್ನು ಹೊಂದಿದವರಾಗಿದ್ದಾರೆ. ಕಥೆ ವಿಡಂಬನೆ ಹಾಗೂ ಹಾಸ್ಯ ಶೈಲಿಯಲ್ಲಿ ಓದುಗರಿಗೆ ರಂಜನೆಯನ್ನುಂಟುಮಾಡುತ್ತದೆ. ಅತಿಯಾಸೆ ಗತಿ ಕೆಡಿಸುತ್ತದೆ ಎಂಬ ಸತ್ಯವನ್ನು ಕತೆಯ ಹಿನ್ನಲೆಯಲ್ಲಿ ಮನಗಾಣಬಹುದಾಗಿದೆ. ಶ್ರೀಮಂತನಾಗಲು ಮಂಜಣ್ಣ ಮಾಡದಿದ್ದ ಕೆಲಸವಿಲ್ಲ. ಆದರೆ ಅದರಿಂದ ನಿರಾಸೆಯಾಗುತ್ತದೆಯೆ ಹೊರತು ಯಾವ ಪ್ರಯೋಜನವು ಆಗುವುದಿಲ್ಲ. ಹಳ್ಳಿಗರ ಅಜ್ಞಾನ, ಮೂಢನಂಬಿಕೆಗಳನ್ನು ದುರುಪಯೋಗ ಪಡಿಸಿಕೊಂಡು ಅವರನ್ನು ವಂಚಿಸಿ ಸ್ವಾರ್ಥ ಸಾಧಿಸಿಕೊಳ್ಳುವ ಬೈರಾಗಿ ನಮ್ಮ ಸಮಾಜದ ಶೋಷಕ ವ್ಯಕ್ತಿಯಾಗಿ ಕಂಡುಬರುತ್ತಾನೆ. ಬೈರಾಗಿ ತನ್ನ ಸ್ವಾರ್ಥಕ್ಕಾಗಿ ಹಳ್ಳಿಗರಲ್ಲಿ ಮುಗ್ಧ ಜನರಲ್ಲಿ ಭಯ ಹುಟ್ಟಿಸುತ್ತಾನೆ. "ದನಗಳ ಸಾವಿಗೆ ಬೈರಾಗಿಯ ಕೋಪ ಕಾರಣವಾಗಿದ್ದರೂ ಶಾಪ ಎಷ್ಟು ಮಾತ್ರವೂ ಕಾರಣವಾಗಿರಲಿಲ್ಲ. ಹಳ್ಳಿಯವರನ್ನು ಭಯಗೊಳಿಸ ಲೋಸುಗವೂ ಶಿಕ್ಷಿಸಲೋಸುಗವೂ ಅವನು ದನಗಳು ಮೇಯುವ ಬಯಲಿನಲ್ಲಿ ತನ್ನಲ್ಲಿದ್ದ ವಿಷದ ಹುಡಿಯನ್ನು ಚೆಲ್ಲಿದ್ದನು. ಮೂಕಪ್ರಾಣಿಗಳು ಹುಲ್ಲಿನೊಡನೆ ವಿಷವನ್ನು ತಿಂದು ಸಾಯುತ್ತಿದ್ದವು. ಹಳ್ಳಿಯವರು ಶರಣಾಗತರಾಗಲು ವಿಷ ಪ್ರಯೋಗ ನಿಂತಿತು. ದನಗಳ ಸಾವು ನಿಂತಿತು."[೩೦] ಹೀಗೆ ಬೈರಾಗಿ ತನ್ನ ಸ್ವಾರ್ಥಕ್ಕಾಗಿ ಅಮಾನವೀಯವಾದ ಕೃತ್ಯಕ್ಕೆ ಇಳಿಯುತ್ತಾನೆ. ಕುವೆಂಪು ಅವರು ಕಂದಾಚಾರಗಳು, ಪುರೋಹಿತಶಾಹಿ ಧೋರಣೆ, ಅಮಾನವೀಯತೆಯ ಬಗ್ಗೆ ತೀವ್ರವಾದ ವಿರೋಧವನ್ನು ವ್ಯಕ್ತಪಡಿಸಿದ್ದಾರೆ. ಹೀಗೆಯೇ ಮಂಜಣ್ಣನಿಗೆ ಗುಪ್ತಧನವನ್ನು ಕಿತ್ತುಕೊಡುವುದಾಗಿ ನಂಬಿಸಿ ಬೈರಾಗಿ ಮೋಸಮಾಡಿ ಸಂಪತ್ತಿನೊಡನೆ ಪರಾರಿಯಾಗುತ್ತಾನೆ. ಮಂಜಣ್ಣನ ದುರಾಸೆ ದುಃಖಕ್ಕೆ ಮೂಲವಾಗುತ್ತದೆ.

ಮೂಢನಂಬಿಕೆ, ಶೋಷಣೆಗಳ ಚಿತ್ರಣದ ಜೊತೆಗೆ ಅದಕ್ಕೆ ಮೂಲ ಪ್ರೇರಣೆಯಾದ ಸ್ವಾರ್ಥದ ದಾಹವನ್ನು ಸೂಚಿಸುತ್ತ ಈ ಕತೆ ತನ್ನ ಆಯಾಮವನ್ನು ಹಿಗ್ಗಿಸಿಕೊಂಡಿದೆ. ಸಮಾಜದ ವಾಸ್ತವಿಕತೆಯನ್ನು ಒಳಗೊಂಡಿದೆ.

'ಮೀನಾಕ್ಷಿಯ ಮನೆಮೇಷ್ಟರು' ಕುವೆಂಪು ಅವರ ಉತ್ತಮ ಕತೆಗಳಲ್ಲಿ ಒಂದಾಗಿದೆ. ಇಲ್ಲಿಯ ಮೇಷ್ಟರ ಪಾತ್ರ ಒಂದು ಅದ್ಭುತ ಸೃಷ್ಟಿ. ಹೆಣ್ಣಿನ ಪ್ರೇಮದ ಸೆಳೆತಕ್ಕೆ ಸಿಕ್ಕಿದ ಗಂಡಿನ ಮನಸ್ಸಿನ ಒಳನೋಟಗಳೆ ಕಥೆಯ ವಸ್ತುವಾಗಿದೆ. ಕಥೆಯ ವಸ್ತು ವಾಸ್ತವಿಕ ದೃಷ್ಟಿಯನ್ನು ಒಳಗೊಂಡಿದೆ. ಮೇಷ್ಟರ ಯೌವನ ಸಹಜವಾದ ಮನಸ್ಸಿನ ತುಡಿತಗಳನ್ನು ಕಥೆಗಾರರು ಸಹಜವಾದ ರೀತಿಯಲ್ಲಿ ಅನಾವರಣ ಮಾಡಿದ್ದಾರೆ. ಮೇಷ್ಟರರು

ದುಷ್ಟಪಾತ್ರವಲ್ಲ. ಆದರೂ ದುರ್ಬಲತೆಗೆ ವಶವಾಗಿ ಬಹು ಬೇಗ ಅದನ್ನು ಗೆದ್ದು ನಿಂತ ಸುಸಂಸ್ಕೃತ ವ್ಯಕ್ತಿಯಾಗಿ ಕಂಡುಬರುತ್ತದೆ. ಮಾನವ ಸಹಜ ಸ್ವಭಾವದ ಚಿತ್ರಣಗಳನ್ನು ಇಲ್ಲಿಯ ಪಾತ್ರಗಳಲ್ಲಿ ಕಾಣಬಹುದಾಗಿದೆ. ಕಥೆಯ ಶೈಲಿ ಓದುಗರ ಮನದ ಕುತೂಹಲವನ್ನು ಬೆಳೆಸುತ್ತ ಆಕರ್ಷಕವಾದ ರೀತಿಯಲ್ಲಿ ನಿರೂಪಿತವಾಗಿದೆ.

ಮೀನಾಕ್ಷಿಯ ಮೇಷ್ಟರು ಸ್ವಭಾವತಃ ಪುಸ್ತಕ ಜೀವಿಯಾದ ಇವರು ತಾವು ಓದಿದ ಕೃತಿಗಳ ನಾಯಕಿಯನ್ನಾಗಿ ಮೀನಾಕ್ಷಿಯನ್ನು ಕಲ್ಪಿಸಿಕೊಂಡು ಸುಖದ ಕನಸು ಕಾಣುತ್ತಾರೆ. ಇಪ್ಪತ್ತರ ತರುಣನಾದ ಮೇಷ್ಟರು ಬಡತನದಿಂದಾಗಿ ಮಕ್ಕಳಿಗೆ ಪಾಠ ಹೇಳುವ ಕಾಯಕವನ್ನು ಮಾಡಬೇಕಾಗಿದೆ. ಯೌವನ ಸಹಜವಾದ ಸೊಬಗಿನ ಆಕರ್ಷಣೆಗೆ ಒಳಗಾಗಿ ತಲೆಯ ಜುಟ್ಟು ತೆಗಿಸಿ ಕ್ರಾಪ ಬಿಡುತ್ತಾರೆ, ಉಡುಗೆಯಲ್ಲಿಯು ಬದಲಾವಣೆಯಾಗುತ್ತದೆ. ಮೀನಾಕ್ಷಿಯ ಲಾವಣ್ಯಕ್ಕೆ ಸಹಜ ಬೆಡಗಿಗೆ ಮನಸೋತು ದಿನದಿಂದ ದಿನಕ್ಕೆ ಹೊತ್ತಿಗೆ ಮುಂಚೆಯೇ ಪಾಠ ಹೇಳಲು ಬರುವುದು, ಮೀನಾಕ್ಷಿಯ ಮನಸ್ಸಿಗೆ ಮೆಚ್ಚುವಂತೆ ಹೊಗಳುವುದು ಒಲವಿನ ಭಾವನೆಯಿಂದ. ಒಮ್ಮೆ ಕೆಂಪು ಹೂವಂಚಿನ ಹಸಿರು ಸೀರೆಯನ್ನುಟ್ಟು ಮೀನಾಕ್ಷಿ ಬಂದಾಗ ಅವರ ಮನಸ್ಸಿನಲ್ಲಿ ಬಯಕೆ ಬಿರುಗಾಳಿ ಭೋರಿಟ್ಟು ಅವರು ಪಾಠ ಹೇಳದೆಯೇ ನೆಪ ಹೇಳಿ ಹಿಂದಿರುಗುತ್ತಾರೆ. ಈ ಸನ್ನಿವೇಶ ತುಂಬ ಸಹಜವಾಗಿ, ಔಚಿತ್ಯಪೂರ್ಣವಾಗಿ ಮೂಡಿಬಂದಿದೆ. ಮೇಷ್ಟರ ಮನೋ ಹೋರಾಟದ ಒಂದು ಪ್ರಮುಖ ಘಟ್ಟವಿದು. ಮೀನಾಕ್ಷಿಯ ಬಾಲಿಕಾ ಸಹಜವಾದ ನೋಟ ನಗುಗಳಿಗೆ ಮೇಷ್ಟರ ಕಲ್ಪನೆ ಪ್ರೇಮದ ಚೌಕಟ್ಟನ್ನು ಹಾಕುತ್ತದೆ. ಮೀನಾಕ್ಷಿಯ ತಂದೆ ತಾಯಿಗಳ ಸಹಜ ವರ್ತನೆಗೆ ಮೇಷ್ಟರು ಬೇರೊಂದು ಅರ್ಥವನ್ನು ಕಲ್ಪಿಸುತ್ತಾರೆ. ಮೀನಾಕ್ಷಿಗೆ ಮದುವೆ ಗೊತ್ತಾಗಿ ಮೇಷ್ಟರು ಪಾಠ ಹೇಳಲು ಬರಬೇಕಾಗಿಲ್ಲವೆಂಬ ಮಾತು ಬರಸಿಡಿಲಿಂತೆ ಬಂದೆರಗಿ ಅವರ ಆಧಾರ ರಹಿತ ಆಶಾಸೌಧ ಕೆಳಕ್ಕುರುಳುತ್ತದೆ. ಈ ಸಂದರ್ಭ ಮೇಷ್ಟರ ಬಗ್ಗೆ ಓದುಗರಲ್ಲಿ ಸಹಾನುಭೂತಿಯನ್ನುಕ್ಕಿಸಿದರೂ, ಇದು ಅನಿವಾರ್ಯವೇ ಹೌದೆನ್ನುವುದನ್ನು ಕತೆಗಾರರು ಸಮರ್ಥವಾಗಿ ಬಿಂಬಿಸಿದ್ದಾರೆ. ಮೇಷ್ಟರು ಮೀನಾಕ್ಷಿಯನ್ನು ಹೇಗಾದರೂ ತನ್ನವಳನ್ನಾಗಿ ಮಾಡಿಕೊಳ್ಳಬೇಕು ಎಂಬ ಭ್ರಮೆಯಿಂದ ಭಾವೋದ್ವೇಗಕ್ಕೆ ಒಳಗಾಗಿ ಮದುವೆಯನ್ನು ತಪ್ಪಿಸುವ ಸಲ್ಲದ ಕಾರ್ಯಕ್ಕಿಳಿಯುತ್ತಾರೆ. ಮುಂದೆ ಮೀನಾಕ್ಷಿಯ ಪತಿಯನ್ನು ಕಂಡು ಅವರ ಸಜ್ಜನಿಕೆ, ಹೃದಯ ಶ್ರೀಮಂತಿಕೆ, ಪ್ರೀತಿಯ ಸತ್ಕಾರ ದೊರೆತಾಗ ಮೇಷ್ಟರ ಮನದಲ್ಲಿನ ಭಾವೋದ್ವೇಗ ಅಶಾಂತಿಯ ಬಿರುಗಾಳಿ ತಣ್ಣಗಾಗಿ ಮನಸ್ಸು ಪರಿವರ್ತನೆಯಾಗುತ್ತದೆ. ಮೀನಾಕ್ಷಿ ಮತ್ತು ಆಕೆಯ ಪತಿ ನಿಮ್ಮ ತಾಯಿಯನ್ನು ಕರೆದುಕೊಂಡು ಬನ್ನಿ ಎಂಬುದಾಗಿ ತಿಳಿಸಿದಾಗ "ಇವತ್ತಿಲ್ಲಿಗೆ ಬಂದು ಗಂಗಾಸ್ನಾನ ಮಾಡಿದಂತಾಯಿತು ನನಗೆ. ನಾನು ಬರ್ತೀನಿ. ನಮ್ಮಮ್ಮನನ್ನು ಕರ್ಕೊಂಡು ಬರ್ತೀನಿ."[೩೦] ಎಂದು ಹೇಳುವ ಮಾತಿನಲ್ಲಿ ಮೇಷ್ಟರ ನಿರ್ಮಲ ಮನಸ್ಸಿನ ಅಂತಃಕರಣ ವ್ಯಕ್ತವಾಗಿದೆ. ಶಿಷ್ಯೆಗೆ ಗುರುವೇ ಆಗಿ ಉಳಿದರೆಂಬುದನ್ನು ಸೂಚಿಸುವುದರ ಜೊತೆಗೆ ಬದಲಾದ ಮನಸ್ಸನ್ನು ವ್ಯಕ್ತಪಡಿಸುತ್ತದೆ. ಈ ಸನ್ನಿವೇಶ ಕುವೆಂಪು ಅವರ ಅದ್ಭುತ ಕಥನಕಲಾ ಪ್ರತಿಭೆಗೆ ಉಜ್ವಲ ನಿದರ್ಶನವಾಗಿದೆ.

ಬಾಲಿಕಾ ಸಹಜವಾದ ಲಜ್ಜೆ, ಮುಗ್ಧತೆ, ಚಂಚಲತೆ, ಯೌವನದ ರಾಗ ಭಾವಗಳ ವ್ಯಕ್ತಿಯಾಗಿ ಮೀನಾಕ್ಷಿ ಕಂಡು ಬರುತ್ತಾಳೆ. ಮೀನಾಕ್ಷಿಯ ಅಪ್ರಬುದ್ಧ ಮನಸ್ಸಿಗೆ ಅನುಗುಣವಾಗಿ ರಸಿಕರೂ,

ಪ್ರತಿಭಾವಂತರೂ ಯೌವನವಂತರೂ ಆಗಿದ್ದ ಮೇಷ್ಟರ ಬಗೆಗೆ ಅಭಿಮಾನ ಮೂಡಿದುದು ಸಹಜವಾಗಿದೆ. ಮೇಷ್ಟರು ಅವಳ ರೂಪಲಾವಣ್ಯಗಳನ್ನು ಪ್ರಶಂಸಿಸಿದ ಮೇಲಂತೂ ಸ್ವಲ್ಪ ಹೆಚ್ಚಾಗಿಯೇ ಅವರಲ್ಲಿ ಮೆಚ್ಚುಗೆ ಮೂಡಿತು. ಆದರೆ ಆ ಮೆಚ್ಚುಗೆ ಮೋಹವಾಗುವಷ್ಟು ಮೀನಾಕ್ಷಿ ಮುಂದುವರಿಯಲಿಲ್ಲ. ಮೀನಾಕ್ಷಿ ಮುಗ್ಧೆ, ಸರಳೆ, ಪ್ರಶಂಸಾಪ್ರಿಯಳು ಹೌದು. ಆದರೆ ಮೇಷ್ಟರ ಬಗ್ಗೆ ನಿರ್ದಿಷ್ಟ ಏಕಾಗ್ರ ಪ್ರಣಯವೇನೂ ವೇಳೆಯಲಿಲ್ಲ. ತನ್ನನ್ನು ಪಡೆದು ಪೋಷಿಸಿದ ತಂದೆ ತಾಯಿಗಳು ತನ್ನ ಬಾಳನ್ನು ಸುಂದರವಾಗಿಯೇ ರೂಪಿಸುವರೆನ್ನುವ ಶ್ರದ್ಧಾಭಾವ ಅವಳಲ್ಲಿತ್ತು. ಮೀನಾಕ್ಷಿಗೆ ಮದುವೆ ಗೊತ್ತಾದಾಗ ಆಕೆಯ ಪತಿಯಾಗುವವನಿಗೆ ಮೊದಲನೆ ಹೆಂಡತಿ ತೀರಿಹೋಗಿದ್ದಾಳೆ ತಾನು ಎರಡನೆ ಹೆಂಡತಿಯಾಗುವೆನಲ್ಲ ಎಂದು ಸಂಕಟಪಡಲಿಲ್ಲ. "ಅಪ್ಪ, ಅಮ್ಮ ಒಪ್ಪಿದ್ದಾರೆ. ಆದ್ದರಿಂದ ಅದು ಸರ್ವಸಮ್ಮತವೆ ಆಗಿರಬೇಕು ಎಂಬುದು ಅವಳ ನಂಬುಗೆ. ಅಲ್ಲದೆ ಎಲ್ಲದರಲ್ಲಿಯೂ ಊಟ, ಬಟ್ಟೆ, ಒಡವೆ, ವಸ್ತು ಎಲ್ಲದರಲ್ಲಿಯೂ ತನಗೆ ಅತ್ಯುತ್ತಮವಾದುದನ್ನೆ ಕೊಡುತ್ತಿರುವ ಪ್ರೀತಿಯ ತಂದೆ ತಾಯಿಗಳು ತನ್ನ ಬಾಳಿನ ಪ್ರಾಣಮೂರ್ತಿಯನ್ನು ತಂದುಕೊಡುವಾಗ ಮಾತ್ರ ಉತ್ತಮವಲ್ಲದುದನ್ನು ಆರಿಸುಸುತ್ತಾರೆಯೆ ? ಆದ್ದರಿಂದ ತನ್ನ ಭಾವೀಪತಿಯಲ್ಲಿ ಆಕೆಗಾಗಲೆ ಅನುರಾಗ ಮೊಳೆಯತೊಡಗಿತು."[೨] ಹೀಗೆ ತಂದೆ ತಾಯಿಗಳ ಆಯ್ಕೆಯಲ್ಲಿ ಪೂರ್ಣಶ್ರದ್ಧೆ ನಂಬಿಕೆ ಅವಳಿಗಿತ್ತು.

ಮೀನಾಕ್ಷಿಯ ಪತಿಯು ಸೌಜನ್ಯದ ಸುಸಂಸ್ಕೃತಿಯ ವ್ಯಕ್ತಿಯಾಗಿದ್ದಾರೆ. ಮೇಷ್ಟರು ಸಂದೇಹಾಸ್ಪದ ರೀತಿಯಲ್ಲಿ ಮನೆಯ ಬಳಿ ಸುಳಿದಾಡಿದಾಗ ಬೇರೆಯಾರಾದರೂ ಆಗಿದ್ದರೆ ಸಂಶಯದಿಂದ ಗದರಿಸುತ್ತಿದ್ದರು, ಅಲಕ್ಷ್ಯದಿಂದ ಕಾಣುತ್ತಿದ್ದರು. ಆದರೆ "ತಾವು ಯಾರನ್ನಾದರೂ ನೋಡಬೇಕೆ ? ನನ್ನಿಂದ ಸಹಾಯವಾಗುವುದಾದರೆ ಮಾಡುತ್ತೇನೆ. ಯಾರಾದರೂ ಮನೆಯನ್ನು ಹುಡುಕುತ್ತಿದ್ದಿರೇನು ?"[೩] ಎಂದು ಅತ್ಯಂತ ವಿನಯಪೂರ್ವಕವಾಗಿ ಸುಸಂಸ್ಕೃತರಾಗಿ ನಡೆದುಕೊಳ್ಳುತ್ತಾರೆ. ಅವರ ಮನೆ, ಮನ, ನಡೆ, ನುಡಿ ಎಲ್ಲವೂ ಸಭ್ಯತೆಯನ್ನು, ಹೃದಯ ಶ್ರೀಮಂತಿಕೆಯನ್ನು ತೋರಿಸುತ್ತವೆ.

ವಸ್ತು, ಶೈಲಿ, ರಚನೆ, ರಮಣೀಯತೆಗಳೆಲ್ಲದರ ಸೃಷ್ಟಿಯಿಂದ-ತುಂಬ ಉತ್ತಮವಾದ ಕತೆಯಾಗಿದೆ. ಭಾರತೀಯ ಸಂಸ್ಕೃತಿಯ - ಬದುಕಿಗೆ ನಿದರ್ಶನವಾದ ವಾಸ್ತವಿಕ ಕತೆಯಾಗಿದೆ.

'ಧನ್ವಂತರಿಯ ಚಿಕಿತ್ಸೆ' ಕಥೆಯಲ್ಲಿ ಕುವೆಂಪು ಅವರು ಭಾರತೀಯ ರೈತನ ಹಸಿವು, ಶೋಷಣೆ, ನೋವು, ಬಡತನ, ದಟ್ಟದಾರಿದ್ರ್ಯವನ್ನು ಮನಮಿಡಿಯುವಂತೆ ಚಿತ್ರಿಸಿದ್ದಾರೆ. ನರಳಾಟದ ಅನ್ವೇಷಣೆಯೇ ಈ ಕತೆಯ ಕೇಂದ್ರ ವಸ್ತು. ರೈತನ ನರಳುವಿಕೆಯ ಹಿನ್ನಲೆಯಲ್ಲಿ ಅನಾವರಣಗೊಳ್ಳುತ್ತ ಹೋಗುವ ಬಡತನ, ಇಲ್ಲಿನ ನರಳುವಿಕೆ, ಬದುಕಿನ ವಿರೋಧಾಭಾಸಗಳು ನಮ್ಮ ಸಾಮಾಜಿಕ ಸುವ್ಯವಸ್ಥೆಯನ್ನು ತೆರೆದು ತೋರಿಸುತ್ತವೆ. ಒಂದು ರೀತಿಯ ಪ್ರತಿಮಾ ವಿಧಾನದ ಶೈಲಿಯಲ್ಲಿ ಕತೆಯ ರಚನೆಯಾಗಿದೆ. ಸುಮಾರು ಎಪ್ಪತ್ತು ವರ್ಷಗಳ ಹಿಂದೆ ರಚನೆಯಾದ ಈ ಕತೆ ಇಂದಿಗೂ ಹೆಚ್ಚು ವಾಸ್ತವಿಕವಾಗಿದ್ದು ಸಾರ್ವಕಾಲಿಕ ಗುಣವುಳ್ಳ ಕಥೆ, ಕುವೆಂಪು ಅವರ ಉತ್ತಮ ಕತೆಗಳಲ್ಲಿ ಒಂದಾಗಿದೆ.

ನರಳಾಟದ ಅನ್ವೇಷಣೆಯೇ ಈ ಕತೆಯ ಕೇಂದ್ರ ವಸ್ತು. ಈ ನರಳಾಟದ ಸ್ವರೂಪವನ್ನು ಕುವೆಂಪು ಹೀಗೆ ವರ್ಣಿಸಿದ್ದಾರೆ. "ಅವರು ಮಾತನಾಡುತ್ತಿದ್ದಾಗಲೇ ಮತ್ತೆ ದೇವಾಪ್ಸರೆಯರ ಆನಂದ

ನಿನಾದಗಳನ್ನೆಲ್ಲ ನುಂಗಿ ಮೀರಿ ಆ ನರಳು ನೆತ್ತರು ಹೆಪ್ಪುಗಟ್ಟುವಂತೆ ಕೇಳಿಸಿತು. ಋಷಿಗಳಿಬ್ಬರೂ ದಿಗ್ಭ್ರಾಂತರಾಗಿ ಗದಗದನೆ ನಡುಗುತ್ತಾ ನಿಂತರು ! ಯಾವನಾದರೊಬ್ಬನನ್ನು ಮುಳ್ಳಿನ ಹಾಸಗೆಯ ಮೇಲೆ ಅಂಗಾತನೆ ಮಲಗಿಸಿ, ಎದೆಯ ಮೇಲೆ ಹೆಬ್ಬಂಡೆಯನ್ನು ಬಹು ಕಾಲದವರೆಗೂ ಹೇರಿ, ಮಣಭಾರದ ಸುತ್ತಿಗೆಯಿಂದ ಬೀಸಿ ಬೀಸಿ ಹೊಡೆದರೆ, ಅವನು ಹೀಗೆ ನರಳಬಹುದೋ ಹಾಗಿದ್ದಿತು ಆ ಭೀಭತ್ಸಕರವಾದ ನರಳು".[೩೪] ಎದೆ ಒಡೆದು ಹೋಗುವಂಥ ಈ ನರಳನ್ನು ಹುಡುಕಿಕೊಂಡು ಭೂಲೋಕಕ್ಕೆ ಬಂದ ವಿಶ್ವಾಮಿತ್ರ ಮತ್ತು ಪರಶುರಾಮರು ತಮ್ಮ ಕಾಲದಲ್ಲಿ ಕಂಡ ಭೂಮಿಗೂ, ಈಗ ಕಾಣುತ್ತಿರುವ ಭೂಮಿಗೂ ಸಾಕಷ್ಟು ಅಂತರವನ್ನು ಕಾಣುತ್ತಾರೆ. ಭೂಮಿಯ ಈಗಿನ ಬದುಕು ಅಸಹನೀಯಲಾಗಿರುವುದಕ್ಕೆ, ಕೃತ್ರಿಮವಾಗಿರುವುದಕ್ಕೆ ಮಾತು ಮತ್ತು ಕೃತಿಗಳ ನಡುವಿನ ಅಂತರವೇ ಕಾರಣವಾಗಿರುವುದನ್ನು ಕಾಣುತ್ತಾರೆ. ನಾಗರಿಕತೆ, ವಿದ್ಯೆ ಮತ್ತು ಪ್ರಗತಿಯ ಹೆಸರಿನಲ್ಲಿ ಕಟ್ಟಿರುವ ಸೌಧಗಳು, ಐಶಾರಾಮವಾದ ಬದುಕು ಇವರನ್ನು ದಂಗುಬಡಿಸುತ್ತದೆ. ವಿಶ್ವಾಮಿತ್ರ ಮತ್ತು ಪರಶುರಾಮರು ಸಾಮಾನ್ಯ ಜನತೆಯ ಹಿತಾಕಾಂಕ್ಷಿಗಳಾದ ಸಮಾಜವಾದಿಗೆ ಸಂಕೇತವಾಗಿದ್ದಾರೆ. ಅವರನ್ನು ಕ್ರಾಂತಿ ಶಕ್ತಿಯ ಸಂಕೇತವಾಗಿ ತೆಗೆದುಕೊಂಡಿರುವುದು ಔಚಿತ್ಯಪೂರ್ಣವಾಗಿದೆ.

ನಮ್ಮೆಲ್ಲರ ಏಳಿಗೆಗೆ ಕಾರಣವಾಗಿರುವ ರೈತನ ದಾರುಣವಾದ ದೃಶ್ಯವನ್ನು ಮನಮಿಡಿಯುವಂತೆ ಕುವೆಂಪು ಚಿತ್ರಿಸಿದ್ದಾರೆ. "ಗುಡಿಸಲಿನ ಒಳಗಡೆ ಮಬ್ಬುಗತ್ತಲೆ ಕವಿದಿತ್ತು............. ಮಧ್ಯೆ ಹಾಸಿದ್ದ ಕಂಬಳಿಯ ಮೇಲೆ ಕೊಳೆ ಹಿಡಿದ ಸೊಂಟದ ಪಂಚೆಯ ವಿನಾ ಸಂಪೂರ್ಣವಾಗಿ ನಗ್ನಾಗಿದ್ದ ರೈತನೊಬ್ಬನು ಅಂಗಾತನೆ ಮಲಗಿ, ಎದೆಯನ್ನು ಎರಡು ಕೈಗಳಿಂದ ಒತ್ತಿಕೊಳ್ಳುತ್ತಾ ಘೋರವಾಗಿ ನರಳುತ್ತಿದ್ದನು. ಆ ನರಕ ಯಾತನೆಗೆ ಅವನ ಕರಿಮೊರಡು ಮೈ, ತಲೆ ಮಾತ್ರ ಬಂಡೆಯಡಿ ಸಿಕ್ಕಿದ ಹಾವಿನಂತೆ, ಒದ್ದಾಡಿಕೊಳ್ಳುತ್ತಿತ್ತು. ಋಷಿಗಳಿಬ್ಬರೂ ನೋಡುತ್ತಿದ್ದ ಹಾಗೆಯೇ ಮುದ್ದೆ ಮುದ್ದೆಯಾದ ನೆತ್ತರ ಬುಗ್ಗೆ ಬುಗ್ಗೆಯಾಗಿ ಚಿಮ್ಮಿ ಅವನ ಬಾಯಿಂದ ಕೆಂಪಗೆ ಹೊರಬಿದ್ದು ನೆಲವನ್ನು ತೊಯ್ಸಿತು ! ಆ ರೈತನ ಪಕ್ಕದಲ್ಲಿ ಚಿಂದಿ ಚಿಂದಿಯಾದ ಕೊಳಕಲು ಸೀರೆಯನ್ನು ಮಾನ ಮುಚ್ಚಿಕೊಳ್ಳುವಷ್ಟರ ಮಟ್ಟಿಗೆ ಉಟ್ಟುಕೊಂಡು ಬಡಕಲಾಗಿದ್ದ ಅವನ ಹೆಂಡತಿ ತಲೆ ಮೇಲೆ ಕೈ ಹೊತ್ತು ಕುಳಿತು ಕಣ್ಣೀರು ಸುರಿಸುತ್ತಿದ್ದಳು. ಆ ಹೆಂಗಸಿನ ಹಿಂದೆ ಕೂದಲು ಕೆದರಿ ವಿಕಾರವಾಗಿದ್ದ, ಬತ್ತಲೆಯಾಗಿ ಹೊಟ್ಟೆ ಡೊಳ್ಳಾಗಿ ಮೈ ಸಣಕಲಾಗಿದ್ದ ನಾಲ್ಕೈದು ವರ್ಷದ ಹುಡುಗಿಯೊಬ್ಬಳು ನೆಲದ ಮೇಲೆ ಒರಗಿ ಮೂರ್ಛೆ ಹೋಗಿರುವಂತೆ ನಿದ್ದೆ ಮಾಡುತ್ತಿದ್ದಳು." [೩೫] ಇಲ್ಲಿನ ಬಡತನದ ಚಿತ್ರಣ ನಮ್ಮ ದೇಶವನ್ನ ಕೊರೆದು ತಿನ್ನುತ್ತಿರುವ ದಾರಿದ್ರ್ಯದ ದಾರುಣ ಚಿತ್ರವಾಗಿದೆ.

ಕುವೆಂಪು 'ಧನ್ವಂತರಿ ಚಿಕಿತ್ಸೆ' ಕಥೆಯಲ್ಲಿ ಶೋಷಣೆ ನಮ್ಮ ಸಾಮಾಜಿಕ ಬದುಕಿನ ಅವಿಭಾಜ್ಯ ಅಂಗವಾಗಿರುವುದನ್ನು ಸೂಕ್ಷ್ಮವಾಗಿ ಚಿತ್ರಿಸುತ್ತಾರೆ. ಶೋಷಣೆಯ ಮುಖ್ಯ ವೃತ್ತಿಯಾಗುಳ್ಳ ವೈದ್ಯರು, ರೆವಿನ್ಯೂ ಅಧಿಕಾರಿಗಳು, ಜನರ ಮೌಢ್ಯವನ್ನು ತಮ್ಮ ಬಂಡವಾಳ ಮಾಡಿಕೊಂಡಿರುವ ಪುರೋಹಿತರು, ಹರಿಕಥೆಯ ದಾಸರು ಮೊದಲಾದೆಲ್ಲರ ಭಾರ ರೈತನ ಎದೆಯ ಮೇಲಿದೆ. ವಿಚಿತ್ರವೆಂದರೆ ಡಾಕ್ಟರು, ಅಧಿಕಾರಿಗಳು, ಪುರೋಹಿತರು ಹತ್ತಿರ ಬಂದರೆ ರೋಗಿಯ ಎದೆ ಭಾರವಾಗುತ್ತದೆ. ನರಳುವುದು, ನೆತ್ತ ಕಾರುವುದು

ಹೆಚ್ಚಾಗುತ್ತದೆ. ದೂರ ಹೋದರೆ ಕಡಿಮೆಯಾಗುತ್ತದೆ. ಅಂದರೆ ಈ ವರ್ಗಗಳು ಶೋಷಿಸುವುದರಲ್ಲಿ ಮಾನವೀಯ ಅನುಕಂಪವನ್ನು ತೋರುವುದಿಲ್ಲ.

ಡಾ. ತಿಪ್ಪೇಸ್ವಾಮಿಯವರು 'ಧನ್ವಂತರಿಯ ಚಿಕಿತ್ಸೆ' ಕಥೆಯ ಬಗೆಗೆ ಹೀಗೆ ಹೇಳಿದ್ದಾರೆ "ರೈತರ ಬೆವರು ಶ್ರೀಮಂತ ವರ್ಗದ ಹಾಗೂ ನಾಗರೀಕ ಬದುಕಿನ ಸುಗಂಧ ಜಲವಾಗಿರುವುದನ್ನು, ರೈತನ ನರಳುವಿಕೆಗೆ ನಾಗರೀಕ ಬದುಕಿನ ಭೋಗ ವಿಲಾಸಗಳು ಕಾರಣವಾಗಿರುವುದನ್ನು ಕಥೆಗಾರರಾದ ಕುವೆಂಪು ಅತ್ಯಂತ ಕಳಕಳಿಯಿಂದ ಗುರುತಿಸುತ್ತಾರೆ, 'ಅಲ್ಲಿನ ದೇವಾಲಯಗಳಲ್ಲಿ ವಿದ್ಯಾನಿಲಯಗಳೂ, ಕ್ರೀಡಾಮಂದಿರಗಳೂ, ಪ್ರಮೋದವನಗಳೂ, ಕರ್ಮಸೌಧಗಳೂ ತಮ್ಮ ಭಾರವನ್ನೆಲ್ಲ ರೈತನ ಎದೆಯ ಮೇಲೆ ಹಾಕಿ, ಸಂಸ್ಕೃತಿ ಮತ್ತು ನಾಗರೀಕತೆ ಎಂಬ ಕೀರ್ತಿಯಿಂದ ಮೆರೆಯುತ್ತವೆ' 'ಧನ್ವಂತರಿಯ ಚಿಕಿತ್ಸೆ' ಕಥೆಯಲ್ಲಿ ಕುವೆಂಪು ನರಳುವಿಕೆಯನ್ನು ಹುಡುಕುವುದರ ಮೂಲಕ ಈ ದೇಶದ ಯಥಾರ್ಥ ದರ್ಶನ ಮಾಡಿಸಿದ್ದಾರೆ."[೩೬] ಅವರ ವಿಚಾರ ಸಮರ್ಥವಾದುದಾಗಿದೆ.

ರೈತನನ್ನು ಎಲ್ಲಾ ಶೋಷಣೆಯಿಂದ ಬಿಡುಗಡೆಗೊಳಿಸುವ ಸಲುವಾಗಿ ಧನ್ವಂತರಿ ತನ್ನ ದಿವ್ಯಮಂತ್ರದಿಂದ, ಅಂತರ್‌ದೃಷ್ಟಿಯಿಂದ ಸಮಸ್ಯೆಯ ಪೂರ್ಣ ಅರಿವಾಗಿ ರೈತನ ಎದೆಯ ಮೇಲಿರುವ ಹೊರೆಯನ್ನು ಇಳಿಸಲು ಪರಶುರಾಮ ಮತ್ತು ವಿಶ್ವಾಮಿತ್ರರಿಗೆ ತಿಳಿಸುತ್ತಾನೆ. ರೈತನ ಸಮಸ್ಯೆಯನ್ನು ತಿಳಿಯಬೇಕಾದರೆ ಅಧಿಕಾರದಲ್ಲಿ ಕುಳಿತಿರುವವರು ಅಧಿಕಾರದ ಗದ್ದುಗೆಯಿಂದ ಕೆಳಗಿಳಿದು ಧನ್ವಂತರಿಯ ಹಾಗೆ ರೈತರ ಬಳಿ ಹೋಗಬೇಕು. ಹೆಚ್. ಜೆ. ಲಕ್ಕಪ್ಪಗೌಡರು 'ಧನ್ವಂತರಿಯ ಚಿಕಿತ್ಸೆ' ಕಥೆಯ ಬಗ್ಗೆ ತಿಳಿಸುತ್ತ "ನಮಗಿಂದು ಬೇಕಾಗಿರುವುದು ಅಧಿಕಾರದ ಶಿಖರದಲ್ಲಿ ಕುಳಿತು ಒಮ್ಮೊಮ್ಮೆ ಮಾತ್ರ ಮಹೋಪಕಾರವೆಂಬಂತೆ ಕೆಳಗಡೆ ದೃಷ್ಟೀಕರಿಸಿ, ಕೇವಲ ಬಹಿರಂಗವನ್ನು ಅಂತಃಕರಣ ರಹಿತ ನೇತ್ರದಿಂದ ಕಾಣುವ ಸ್ವಾರ್ಥಿನಾಯಕರಲ್ಲ. ಕೆಳಗಿಳಿದು ಬಂದು ಜನತೆಯೊಡನೆ ಬೆರೆತು ಅವರ ಹೃದಯವನ್ನರಿಯುವ ಸಹಜ ಸಹಾನುಭೂತಿಯ ಅಂತರ್‌ದೃಷ್ಟಿಯುಳ್ಳ ಧನ್ವಂತರಿಯಂತಹ ದ್ರಷ್ಟಾರರು, ಪರಿಣತರು ಮತ್ತು ನಿಷ್ಠಾವಂತ ಪ್ರಯತ್ನಗಳಿಂದ ಪರಿಣತರ ನೆರವಿನಿಂದ ಸಮಸ್ಯೆಗಳನ್ನರಿತು ಅವುಗಳನ್ನು ತತ್‌ಕ್ಷಣವೇ ಪರಿಹರಿಸುವ ಕೆಚ್ಚು ನೆಚ್ಚುಗಳನ್ನು ಕ್ರಾಂತಿಕಾರಿ ಮನೋಭಾವದ ವಿಶ್ವಾಮಿತ್ರರಂತಹ ಸಮರ್ಥ ನಿಸ್ವಾರ್ಥ ಸಮಾಜ ಸುಧಾರಕರು. ಏಕೆಂದರೆ ಕೆಳಕ್ಕಿಳಿದು ಬಂದು ಲೋಕೋಪಕಾರಿಯಾಗದಿದ್ದರೆ ಶಿವನ ಜಟೆಯಲ್ಲಿದ್ದರೂ ಗಂಗೆ ತ್ಯಾಜ್ಯವೇ. ಹೀಗೆ ಈ ಕತೆಯೊಂದು ಅದ್ಭುತ ಪ್ರತಿಮಾಲೋಕವಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಬರೆದ ಈ ಕತೆಯ ವಸ್ತು ಇಂದಿಗೂ ಅವರಿಗಿಂತ ಹೆಚ್ಚಾಗಿಯೇ ಅನ್ವಯಿಸುತ್ತದೆ. ಸರ್ವವ್ಯಾಪಕ ಸಂಕೀರ್ಣ ಸಮಸ್ಯೆಗಳನ್ನು ಅತ್ಯಂತ ಸಶಕ್ತವಾಗಿ ಕಲಾತ್ಮಕವಾಗಿ ಹೃದ್ರಮ್ಯವಾಗಿ ನಿರೂಪಿಸುವ ಅದ್ಭುತ ಧ್ವನಿಶಕ್ತಿಯ ಈ ಕೃತಿ ಕ್ರಾಂತದರ್ಶಿಯಾದ ಕವಿಯ ಸರ್ವಶ್ರೇಷ್ಠ ದರ್ಶನ ಪ್ರತಿಭೆಯ ಜ್ವಲಂತ ಸಾಕ್ಷಿಯಾಗಿದೆ. ಇಂತಹ ದರ್ಶನಾತ್ಮಕ ಕತೆಗಳು ನಮ್ಮಲ್ಲಿ ವಿರಳಾತಿವಿರಳ."[೩೭] ಎಂಬುದು ಅತ್ಯಂತ ಸಮರ್ಥನೀಯವಾದ ಅಂಶವಾಗಿದೆ. ಕುವೆಂಪು ಅವರ ಆಧುನಿಕ ಸಮಾಜದ ಶ್ರೀಮಂತ ವರ್ಗದ ಸುಖ, ಭೋಗ, ವಿಲಾಸಕ್ಕಾಗಿ ರೈತನ ಶೋಷಣೆಯಾಗುತ್ತಿರುವುದನ್ನು ಅತ್ಯಂತ ಕಾಳಜಿಯಿಂದ ತಿಳಿಸಿದ್ದಾರೆ. ಅಲ್ಲದೆ ರೈತನ ಹೆಗಲಿಗೆ ರಾಜ್ಯಭಾರದ ಹೊರೆಯನ್ನು ತಲುಪಿದಾಗ

ಮಾತ್ರ ಸುಖೀರಾಜ್ಯ ಸ್ಥಾಪಿತವಾಗಬಲ್ಲದು ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಕುವೆಂಪು ರೈತನನ್ನು 'ನೇಗಿಲ ಯೋಗಿ' ಎಂದು ಕರೆದಿದ್ದಾರೆ. ಅನ್ನದಾತನಾದ ರೈತನ ತ್ಯಾಗ ಮಹತ್ತರವಾಗಿದೆ. 'ಧನ್ವಂತರಿಯ ಚಿಕಿತ್ಸೆ' ಕಥೆಯಲ್ಲಿ ಮಾನವೀಯ ಅಂತಃಕರಣವೊಂದು ಸುಂದರ ಸುಖೀ ಸಮಾಜದ ನಿರ್ಮಾಣಕ್ಕಾಗಿ ತುಡಿಯುತ್ತಿರುವುದನ್ನು ಮೊದಲಿನಿಂದ ಕೊನೆಯವರೆಗೂ ಗುರುತಿಸಬಹುದಾಗಿದೆ.

'ವೈರಾಗ್ಯದ ಮಹಿಮೆ' ಕಥೆಯು ಸೋಮಾರಿಯು, ಭೋಗ ಲಾಲಸಿಯೂ ಆದ ರಾಯಚರಣನ ಕಪಟ ವೈರಾಗ್ಯ ಸಾಧನೆಯು ಬೂಟಾಟಿಕೆಯನ್ನು ವಿಡಂಬನಾತ್ಮಕವಾಗಿ ತಿಳಿಸುತ್ತದೆ. ರಾಯಚರಣ ತನ್ನ ಸ್ವಾರ್ಥ ಸುಖಕ್ಕಾಗಿ ಬೈರಾಗಿ ವೇಷ ಹಾಕಿ ಜನರನ್ನು ವಂಚಿಸುವುದೇ ಈ ಕಥೆಯ ವಸ್ತುವಾಗಿದೆ. ಕಥೆ ಹಾಸ್ಯ ಹಾಗೂ ವಿಡಂಬನಾತ್ಮಕ ಶೈಲಿಯ ರಚನೆಯಿಂದ ಓದುಗರ ಮನಸ್ಸಿಗೆ ಆಕರ್ಷಕವಾಗಿ ಕಂಡುಬರುತ್ತದೆ. ಕಥೆಯ ಮುಖ್ಯ ಪಾತ್ರವಾದ ರಾಯಚರಣ, ಸೋಮಾರಿತನವನ್ನು ವೃತ್ತಿಯಾಗಿ ಮಾಡಿಕೊಂಡವನು. ಹೊಟ್ಟೆಹೊರೆಯುವುದಕ್ಕಾಗಿ ಬದುಕಿನ ಎಲ್ಲ ಸುಖ ಸಂತೋಷವನ್ನು ಅನಾಯಾಸವಾಗಿ ಸವಿಯುವದಕ್ಕಾಗಿ ವೈಷ್ಣವ ಬೈರಾಗಿಯಾಗುತ್ತಾನೆ. ಆ ಮೂಲಕ ತನ್ನ ಮನಸ್ಸಿನ ಎಲ್ಲ ಬಯಕೆಗಳನ್ನು ಈಡೇರಿಸಿಕೊಳ್ಳುತ್ತಾನೆ.

ಶುದ್ಧ ಮೈಗಳ್ಳನಾಗಿ ಅನ್ನಕ್ಕೆ ದಂಡ ಭೂಮಿಗೆ ಭಾರ ಎಂಬಂತೆ ಇದ್ದವನು ರಾಯಚರಣ. ಬಿಟ್ಟಿಕೂಳಿನ ಈ ಧಾಂಡಿಗನಿಗೆ ಕಾಮಿನೀ ಮೋಹವು ಅಂಟಿತು. ಗುರುಕೇನ್ ರಾಮ ಗೋಸ್ವಾಮಿಯ ಉಪದೇಶ ತೀರಾ ಸರಳ "ಅಟ್ಟಿದರೆ ಓಡುತ್ತದೆ ಬಿಟ್ಟರೆ ಹಿಂಬಾಲಿಸುತ್ತದೆ". [೩೮] ಸುಖದ ಬೆನ್ನು ಹತ್ತಬಾರದು, ಆಗ ಅದೇ ಬೆನ್ನು ಹತ್ತುತ್ತದೆ. ವೈಷ್ಣವ ವೈರಾಗಿಯಾಗಿ ಈ ರಾಯಚರಣ ಭಗವಾನ್‌ದಾಸ ಬಾಬಾಜಿಯಾಗಿ ಬಿಟ್ಟ. ಪವಿತ್ರ ಕ್ಷೇತ್ರ ಸಂದರ್ಶನ, ಪ್ರಸಾದ ಸ್ವೀಕಾರ, ಪಾದಪೂಜೆ, ಮುಖ್ಯವಾಗಿ ಮಧುರ ಭಕ್ತಿ ಸಾಧನೆ, ವೈಷ್ಣವ ಮೇಳಗಳಲ್ಲಿ ಬೈರಾಗಿಣಿಯರ ಸಹವಾಸ ಸುಖ. ಒಮ್ಮೆ ಮಧುರ ಭಾವಸಾಧನೆಯಲ್ಲಿ ಅಚಾತುರ್ಯವೂ ಆಗಿಬಿಟ್ಟಿತು. ಬುರುಕಿ ಸುಂದರಿಯರ ಆಯ್ಕೆ ನಗು ಬರಿಸುತ್ತದೆ. ವಿಚಿತ್ರವೆಂದರೆ ಗುರು ಕೇನರಾಮ ವಿಧಿವಶನಾದುದರಿಂದ ಆತನ ತರುಣ ವಿಧವೆ ರಾಧಾದಾಸಿಯಾಗಿ, ರಾಯಚರಣಕ್ಕೆ ಕೃಷ್ಣದಾಸನಾಗಿ ರಾಧಾಕೃಷ್ಣರನ್ನೇ ಮೀರಿಸುತ್ತಾರೆ. ನಮ್ಮ ಸಮಾಜದಲ್ಲಿರುವ ಕಾವಿ ವೇಷಧಾರಿಗಳ ಕಪಟ ಬೂಟಾಟಿಕೆ, ಮೌಢ್ಯತೆ, ಸ್ವೇಚ್ಛಾಚಾರಗಳು ಕತೆಯಲ್ಲಿ ಅನಾವರಣಗೊಂಡಿವೆ. ಮಾನವ ಸ್ವಭಾವದಲ್ಲಿ ಹುದುಗಿರುವ ಲಾಲಸೆಯೇ ಇಲ್ಲಿಯ ವಸ್ತುವಾಗಿ ರಂಜಿಸುತ್ತದೆ.

ಕುವೆಂಪು ಅವರ ಪ್ರಕೃತಿಯ ಪ್ರೀತಿ ಬಹುಪಾಲು ಕಥೆಗಳಲ್ಲಿ ಮೂಡಿಬಂದಿದೆ. ಕವಿಯ ಪ್ರಕೃತಿ ಪ್ರೀತಿ ಕೇವಲ ಸೌಂದರ್ಯಾನುಭೂತಿಯಲ್ಲಿಯೆ ಮುಕ್ತಾಯಗೊಳ್ಳುವುದಿಲ್ಲ. ನಿಸರ್ಗದ ಚಲುವಿನಲ್ಲಿಯೇ ಸೃಷ್ಟಿಯ ಚೈತನ್ಯವನ್ನು ಕಾಣುತ್ತಾರೆ. "ಗಗನದಲ್ಲಿ ಗಣನೆಯಿಲ್ಲದೆ ಮಿಣುಕುತ್ತಿದ್ದ ಚುಕ್ಕಿಗಳನ್ನು, ಮೋಹದ ಮುದ್ದೆಯಂತೆ ರಂಜಿಸುತ್ತಿದ್ದ ತಿಂಗಳನ್ನು, ಚಂದ್ರಿಕೆಯಲ್ಲಿ ಕೆನೆಯ ತುಂಡುಗಳಂತೆ ತೇಲುತ್ತಿದ್ದ ಮುಗಿಲಿನ ಗುಂಪನ್ನೂ, ಬಳಸಿದ್ದ ಬನಗಳ ಮಾಲೆಯನ್ನು ಗಂಗೆ ಯಮುನೆಯರಿಬ್ಬರೂ ಒಬ್ಬರನ್ನೊಬ್ಬರು ಆಲಿಂಗಿಸಿ ಪ್ರವಹಿಸುತ್ತಿದ್ದ ಗಂಭೀರ ಗಮನವನ್ನು ನೋಡಿ, ನೋಡಿ, ಜಗದೊಡೆಯನ ದೇಹವು ಪೆಂಪು ಸೂಚಿಸುವ ಆತನ ಆತ್ಮದ ಭವ್ಯ ವೈಭವವನ್ನು ನೆನೆದು ನೆನೆದು ಮೈ ಮರೆಯುತ್ತಿದ್ದನು." [೩೯] ಹೀಗೆ ಪ್ರಕೃತಿಯ

ಸೌಂದರ್ಯದ ಬೆಳಕಿನಲ್ಲಿ ದೈವ ಸ್ವರೂಪವನ್ನು ಕಾಣುತ್ತಾರೆ. ಪ್ರಕೃತಿಯ ವರ್ಣನೆ ಕಥೆಗಳ ಸನ್ನಿವೇಶ, ಸಂದರ್ಭಕ್ಕೆ ಪೂರಕವಾಗಿ ಮೂಡಿಬಂದಿದೆ. ಈ ದೃಷ್ಟಿಯಿಂದ ಕುವೆಂಪು ಅವರ ಕಥೆಗಳನ್ನು ಓದುವುದೇ ಒಂದು ವಿಶೇಷ ಅನುಭವ. ಇಲ್ಲಿಯ ಭಾಷೆ, ನುಡಿಗಟ್ಟುಗಳು, ಸಮೃದ್ಧ ಜೀವನಾನುಭವಗಳು, ಹಾಸ್ಯ, ವ್ಯಂಗ್ಯಗಳು, ಓದುಗರಿಗೆ ಮುದಕೊಡುವಂತೆ, ಬದುಕಿನ ಮೌಲ್ಯಗಳ ಅನ್ವೇಷಣೆಗೂ ಪ್ರೇರಣೆ ನೀಡುತ್ತವೆ. ಕುವೆಂಪು ಅವರ ಕಥೆಗಳಲ್ಲಿ ಮಾನವೀಯತೆ, ಸಾಮಾಜಿಕ ಕಾಳಜಿ, ಅಂಧಶ್ರದ್ಧೆ ಹಾಗೂ ಪುರೋಹಿತಶಾಹಿಧೋರಣೆಯ ವಿರೋಧ ಈ ಎಲ್ಲಾ ವಿಚಾರಗಳನ್ನೂ ತುಂಬಾ ಪರಿಣಾಮಕಾರಿಯಾಗಿ ತಿಳಿಸಲಾಗಿದೆ.

ಕುವೆಂಪು ಅವರ ಕಥೆಗಳ ರಚನೆ, ವಸ್ತು, ಶೈಲಿ ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಪ್ರೊ. ದೇಜಗೌ ತಿಳಿಸಿರುವಂತೆ "ಕ್ಲಿಷ್ಟ ಪದಗಳ ಭಾರವಿಲ್ಲದೆ, ಸುತ್ತು ಬಳಸಿನ ಸುದೀರ್ಘ ವಾಕ್ಯಗಳ ಗೊಂದಲವಿಲ್ಲದೆ, ಗಗನ ವಿಹಾರಿಯಾದ ಕಾವ್ಯ ಶೈಲಿಯ ತೊಡಕಿಲ್ಲದೆ, ಪಾತ್ರ, ಘಟನೆ, ಸನ್ನಿವೇಶ ವರ್ಣನೆ ಹಾಗೂ ಭಾವಾಲೋಚನೆಗಳಿಗೆ ತಕ್ಕಂತೆ ಹೊಂದಿಕೊಳ್ಳುವ ಲಲಿತವೂ ಸುಭಗವೂ ಆದ ಸುಂದರ ಗದ್ಯ ಕಥನ ಶೈಲಿ ಎಲ್ಲ ಕಥೆಗಳಲ್ಲಿಯೂ ರಂಜಿಸುತ್ತದೆ."[೧೦]

## ಅಡಿಟಿಪ್ಪಣಿಗಳು

೧. ಡಾ. ಎ. ಎಸ್. ವೇಣುಗೋಪಾಲರಾವ್, *ಶ್ರೀ ಕುವೆಂಪು ಅವರ ಸಣ್ಣ ಕಥೆಗಳು*, ಸಹ್ಯಾದ್ರಿ ಪ್ರಕಾಶನ, ಮೈಸೂರು ೧೯೮೪, ಪು. ೨೩

೨. ದೇಜಗೌ, *ಕುವೆಂಪು ಶೈಲಿ* ಸಹ್ಯಾದ್ರಿ ಪ್ರಕಾಶನ, ಮೈಸೂರು ೧೯೯೧, ಪು. ೬

೩. ಕುವೆಂಪು, *ಸಂನ್ಯಾಸಿ ಮತ್ತು ಇತರ ಕಥೆಗಳು*, ಉದಯರವಿ ಪ್ರಕಾಶನ, ಮೈಸೂರು ೧೯೯೧, ಪು. ೩

೪. ಅದೇ, ಪು. ೯



೫. ಅದೇ, ಪು. ೧೨

೬. ಅದೇ, ಪು. ೧೨

೭. ಎಚ್. ಜೆ. ಲಕ್ಕಪ್ಪಗೌಡ, ಕವಿಯ ಕುಂಚದ ಕಥಾ ಚಿತ್ರಗಳು, *ಗಂಗೋತ್ರಿ*, ಗೀತಾಬುಕ್ ಹೌಸ್, ಮೈಸೂರು ೧೯೬೮, ಪು. ೭೮೭

೮. ಕುವೆಂಪು, *ಸಂನ್ಯಾಸಿ ಮತ್ತು ಇತರ ಕಥೆಗಳು*, ಉದಯರವಿ ಪ್ರಕಾಶನ, ಮೈಸೂರು ೧೯೯೧, ಪು. ೧

೯. ಅದೇ, ಪುಟ ೧೪

೧೦. ಅದೇ, ಪು. ೨೨

೧೧. ಎಚ್. ಜೆ. ಲಕ್ಕಪ್ಪಗೌಡ, 'ಕವಿಯ ಕುಂಚದ ಕಥಾಚಿತ್ರಗಳು' *ಗಂಗೋತ್ರಿ*, ಗೀತಾಬುಕ್ ಹೌಸ್, ಮೈಸೂರು ೧೯೯೮, ಪು. ೭೮೮

೧೨. ಕುವೆಂಪು, *ಸಂನ್ಯಾಸಿ ಮತ್ತು ಇತರ ಕಥೆಗಳು*, ಉದಯ ರವಿ ಪ್ರಕಾಶನ, ಮೈಸೂರು ೧೯೯೧, ಪು. ೨೮

೧೩. ಡಾ. ಎ. ಎಸ್. ವೇಣುಗೋಪಾಲರಾವ್, *ಶ್ರೀ ಕುವೆಂಪು ಅವರ ಸಣ್ಣ ಕಥೆಗಳು*, ಸಹ್ಯಾದ್ರಿ ಪ್ರಕಾಶನ, ಮೈಸೂರು ೧೯೮೪, ಪು. ೪೬

೧೪. ಡಾ. ತಿಪ್ಪೇಸ್ವಾಮಿ, 'ಕುವೆಂಪು ಕಥೆಗಳು ಒಂದು ವಿವೇಚನೆ' ಪುಸ್ತಕ ಪ್ರಪಂಚ (ಮಾಸಿಕ) ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು ಮೇ ೧೯೮೯, ಪು. ೯೮

೧೫. ಕುವೆಂಪು *ಸಂನ್ಯಾಸಿ ಮತ್ತು ಇತರ ಕಥೆಗಳು,* ಉದಯರವಿ ಪ್ರಕಾಶನ, ಮೈಸೂರು ೧೯೯೧, ಪು. ೩೬

೧೬. ಅದೇ, ಪು. ೫೨

೧೭. ಡಾ. ತಿಪ್ಪೇಸ್ವಾಮಿ, 'ಕುವೆಂಪು ಕಥೆಗಳು ಒಂದು ವಿವೇಚನೆ' ಪುಸ್ತಕ ಪ್ರಪಂಚ (ಮಾಸಿಕ) ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು, ಮೇ ೧೯೮೯, ಪು. ೧೦೦

೧೮. ಕುವೆಂಪು, *ಸಂನ್ಯಾಸಿ ಮತ್ತು ಇತರ ಕಥೆಗಳು,* ಉದಯರವಿ ಪ್ರಕಾಶನ, ಮೈಸೂರು ೧೯೯೧, ಪು. ೫೯

೧೯. ಅದೇ, ಪು. ೬೫

೨೦. ಅದೇ ಪು. ೭೦

೨೧. ಡಾ. ತಿಪ್ಪೇಸ್ವಾಮಿ, 'ಕುವೆಂಪು ಕಥೆಗಳು ಒಂದು ವಿವೇಚನೆ' ಪುಸ್ತಕ ಪ್ರಪಂಚ (ಮಾಸಿಕ) ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು, ಮೇ ೧೯೮೯, ಪು. ೧೦೧.

೨೨. ಕುವೆಂಪು, *ಸಂನ್ಯಾಸಿ ಮತ್ತು ಇತರ ಕಥೆಗಳು,* ಉದಯರವಿ ಪ್ರಕಾಶನ, ಮೈಸೂರು, ೧೯೯೧, ಪು. ೮೭

೨೩. ಅದೇ, ಪು. ೮೮

೨೪. ಅದೇ, ಪು. ೯೧

೨೫. ಅದೇ, ಪು. ೯೪

೨೬. ಡಿ. ಎಸ್. ನಾಗಭೂಷಣ, *ಕುವೆಂಪು ಒಂದು ಪುನರನ್ವೇಷಣೆ,* ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೫, ಪು. ೧೧೦.

೨೭. ಕುವೆಂಪು, *ನನ್ನ ದೇವರು ಮತ್ತು ಇತರ ಕಥೆಗಳು,* ಉದಯರವಿ ಪ್ರಕಾಶನ, ಮೈಸೂರು, ೧೯೯೦, ಪು.೧೧

೨೮. ಅದೇ, ಪು. ೧೪

೨೯. ಅದೇ, ಪು. ೨೯

೩೦. ಅದೇ, ಪು. ೪೮

೩೧. ಅದೇ, ಪು. ೭೦

೩೨. ಅದೇ, ಪು. ೬೫

೩೩. ಅದೇ, ಪು. ೬೭

೩೪. ಅದೇ, ಪು. ೭೩

೩೫. ಅದೇ, ಪು. ೭೭

೩೬. ಡಾ. ತಿಪ್ಪೇಸ್ವಾಮಿ, 'ಕುವೆಂಪು ಕಥೆಗಳು ಒಂದು ವಿವೇಚನೆ' ಪುಸ್ತಕ ಪ್ರಪಂಚ (ಮಾಸಿಕ) ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು, ಮೇ ೧೯೮೯, ಪು. ೧೦೮.

೩೭. ಎಚ್. ಜೆ. ಲಕ್ಕಪ್ಪಗೌಡ, 'ಕವಿಯ ಕುಂಚದ ಕಥಾ ಚಿತ್ರಗಳು' *ಗಂಗೋತ್ರಿ,* ಗೀತಾ ಬುಕ್ ಹೌಸ್, ಮೈಸೂರು, ೧೯೬೮, ಪು ೮೦೧

೩೮. ಕುವೆಂಪು, *ನನ್ನ ದೇವರು ಮತ್ತು ಇತರ ಕಥೆಗಳು,* ಉದಯರವಿ ಪ್ರಕಾಶನ, ಮೈಸೂರು ೧೯೯೦, ಪು. ೮೬

೩೯. ಕುವೆಂಪು, *ಸಂನ್ಯಾಸಿ ಮತ್ತು ಇತರ ಕಥೆಗಳು,* ಉದಯರವಿ ಪ್ರಕಾಶನ, ಮೈಸೂರು ೧೯೯೧, ಪು. ೧

೪೦. ದೇಜಗೌ, *ಕುವೆಂಪು ಸಾಹಿತ್ಯ ಕೆಲವು ಅಧ್ಯಯನಗಳು,* ಸಂಪುಟ-೨ ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೯೧, ಪು. ೧೧೦

ಕುವೆಂಪು ಅವರು ರಚಿಸಿರುವ ಹದಿನೇಳು ಕತೆಗಳಲ್ಲಿ ಸಾಕಷ್ಟು ಸಂಖ್ಯೆಯ ಪಾತ್ರಗಳು ಬರುತ್ತವೆಯಾದರು ಕತೆಗಾರರ ಗಮನವೆಲ್ಲ ಪ್ರಮುಖ ಪಾತ್ರಗಳಲ್ಲಿ ಕೇಂದ್ರೀಕೃತವಾಗಿದೆ. ಕುವೆಂಪು ಅವರು ಪ್ರಕೃತಿ ಪ್ರಿಯರು. ಆದರೆ ಅವರ ಪ್ರಕೃತಿ ಪ್ರೀತಿ ಕೇವಲ ಸೌಂದರ್ಯಾನುಭೂತಿಯಲ್ಲಿಯೆ ಪರ್ಯವಸಾನವಾಗುವುದಿಲ್ಲ. ಲೋಕದ ಸಾಮಾನ್ಯ ಜನರ ಬದುಕು, ಬಡತನ, ರೈತನದಾರುಣವಾದ ಜೀವನ, ದಲಿತರ ಶೋಷಣೆ, ಜಾತೀಯತೆ, ಮೌಢ್ಯತೆ, ವೈಚಾರಿಕತೆ, ಪ್ರಣಯದ ಮೋಹ, ಸ್ವಾರ್ಥಜನರ ದುರಾಸೆ, ಕ್ರೌರ್ಯ, ತ್ಯಾಗ ಈ ಎಲ್ಲ ಸಂಗತಿಗಳನ್ನು ಕುವೆಂಪು ಅವರ ಕತೆಯ ಪಾತ್ರಗಳ ಮೂಲಕ ತಿಳಿಯಬಹುದಾಗಿದೆ.

ಸಣ್ಣ ಕಥೆಗಳಲ್ಲಿ ಬರುವ ಪಾತ್ರಗಳ ಸಂಖ್ಯೆ ಬೆರಳೆಣಿಕೆಯಷ್ಟಿದ್ದು ಮಿತಿಯುಳ್ಳದ್ದಾಗಿರುತ್ತವೆ. ಲೇಖಕರ ಪಾತ್ರ ಸೃಷ್ಟಿಯ ಬಗೆಗೆ ಮಿರ್ಜಿ ಅಣ್ಣಾರಾಯರು ತಮ್ಮ ಅಭಿಪ್ರಾಯ ತಿಳಿಸುತ್ತ "ಈ ಪಾತ್ರ ಪ್ರದರ್ಶನ (Characterisation) ವಿಷಯದಲ್ಲಿ ಒಬ್ಬೊಬ್ಬ ಸಾಹಿತಿಗೂ ಒಂದೊಂದು ದೃಷ್ಟಿ ಕೋನವಿರುತ್ತದೆ. ಅದು ಅವರವರ ಜೀವನ ದೃಷ್ಟಿಯನ್ನು ಅವಲಂಬಿಸಿರುತ್ತದೆ. ಕವಿಯ ಜೀವನ ಅನುಭವಗಳ ವೈಶಾಲ್ಯ, ಧ್ಯೇಯ, ನಿಷ್ಠೆ, ಸೂಕ್ಷ್ಮ ನಿರೀಕ್ಷಣ ಶಕ್ತಿ, ಲೋಕದ ವಿಷಯಕ್ಕಿರುವ ಸಹಾನುಭೂತಿ, ಚಿತ್ರಣಶಕ್ತಿ ಇವೆಲ್ಲವುಗಳು ಒಟ್ಟುಗೂಡಿ ಪಾತ್ರಸೃಷ್ಟಿಯ ದೃಷ್ಟಿಯನ್ನು ಪೂರ್ಣಗೊಳಿಸುತ್ತವೆ. ಇಂತಹ ಒಂದು ಪರಿಪೂರ್ಣತೆಯನ್ನು ಪುಟ್ಟಪ್ಪನವರ ಸಾಹಿತ್ಯ ಲೋಕದಲ್ಲಿ ನಾವು ಅನುಭವಿಸುತ್ತೇವೆ.[1] ಕುವೆಂಪು ಅವರ ಜೀವನಾನುಭವ, ಕಲ್ಪನೆಯ ಮೆರುಗು ಕತೆಗಳ ಪಾತ್ರ ಸೃಷ್ಟಿಯಲ್ಲಿ ವ್ಯಕ್ತವಾಗಿದೆ. ಅವರ ಕಥೆಗಳಲ್ಲಿ ವೈವಿಧ್ಯಮಯವಾದ ಪಾತ್ರಸೃಷ್ಟಿಯನ್ನು ಕಾಣಬಹುದಾಗಿದೆ.

'ಸಂನ್ಯಾಸಿ' ಕಥೆಯಲ್ಲಿ ರಮೇಶನಿಗೆ ವಿರಕ್ತಿ ಮಾರ್ಗವೂ ಆತನ ಬಾಳಿನ ಧ್ಯೇಯವಾಗಿತ್ತು. ಆದರ್ಶ ಸಂನ್ಯಾಸಿಯಾಗಿರಬೇಕೆಂಬ ಹಂಬಲದಿಂದ ಒಲ್ಲದ ಮದುವೆಯ ಬಂಧನವನ್ನು ಕಳಚಿ ವೈರಾಗ್ಯದ ಜೀವನದ ಕಡೆಗೆ ಸಾಗಲು ಪ್ರಯತ್ನಿಸುತ್ತಾನೆ. ಇಂದಿರೆ ರಮೇಶನನ್ನು ಮದುವೆಯಾಗಿದ್ದರೂ ಆತನಿಂದ ದೂರವಾಗಿ ಸಮಾಜದ ಜನರ ಅವಮಾನಕ್ಕೆ ಒಳಗಾಗಬೇಕಾಗುತ್ತದೆ ಎಂಬ ಆತಂಕ ಅವಳನ್ನು ಕಾಡುತ್ತಿದೆ.

ಗುರುದೇವನಾದ ಪ್ರೇಮಾನಂದರ ಬಳಿ ತನ್ನ ಮನದ ನೋವನ್ನು ಹೇಳಿಕೊಳ್ಳುವ ಬಗೆ ಓದುಗರ ಮನವನ್ನು ತಟ್ಟುತ್ತದೆ. "ಆತನು ವಿವಾಹಕ್ಕೆ ಒಪ್ಪಿರಲಿಲ್ಲ. ವಿರಕ್ತಿ ಮಾರ್ಗವೆ ಆತನ ಧ್ಯೇಯವಾಗಿತ್ತು. ಆದರೆ ಆತನ ತಂದೆ ತಾಯಿಗಳು ಆತನು ಎಲ್ಲಿ ಸಂನ್ಯಾಸಿಯಾಗಿ ಬಿಡುವನೋ ಎಂಬ ಹೆದರಿಕೆಯಿಂದ ಆತನಿಗೆ ಬಲಾತ್ಕಾರವಾಗಿ ಮದುವೆ ಮಾಡಿದರು. ಆತನು ಹೇಳದೆ ಕೇಳದೆ ಬಂದುಬಿಟ್ಟನು. ನನ್ನ ಬಾಳು ಮರುಭೂಮಿಯಾಯಿತು. ಎಲ್ಲರೂ ನನ್ನನ್ನು ಕಡೆಗಣ್ಣಿನಿಂದ ನೋಡತೊಡಗಿದರು. ನಾನು ರಮೇಶನ ನೆಲೆಯನ್ನು ತಿಳಿಯಬೇಕೆಂದು ಈ ವೇಷವನ್ನು ಧರಿಸಿ ಅಲೆದು ಅಲೆದು ತಮ್ಮ ಸನ್ನಿಧಿಯಲ್ಲಿ ನನ್ನ ಇಷ್ಟದೇವತೆಯನ್ನು ಕಂಡೆ........ ಅನಾಥಳಾದ ನಾನು ಪತಿಭಿಕ್ಷೆಯನ್ನು ಬೇಡುತ್ತೇನೆ. ತಾವು ಸರ್ವಜ್ಞರು, ಮಹಾತ್ಮರು ನನಗೆ ಜೀವದಾನ ಮಾಡಬೇಕು."[2] ಅಸಹಾಯಕಳಾದ ಮುಗ್ಧ ಹೆಣ್ಣೊಬ್ಬಳ ಮನದಾಳದ

ನೋವನ್ನು ಕುವೆಂಪು ಹೃದಯ ಸ್ಪರ್ಶಿಯಾಗುವಂತೆ ತಿಳಿಸಿದ್ದಾರೆ. ಇಂದಿರೆಯ ಪಾತ್ರ ನೆನಪಿನಾಳದಲ್ಲಿ ಉಳಿಯುತ್ತದೆ.

ಎಚ್. ಜೆ. ಲಕ್ಕಪ್ಪಗೌಡರು 'ಸಂನ್ಯಾಸಿ' ಕಥೆಯ ಪಾತ್ರಗಳ ಬಗೆಗೆ ತಿಳಿಸುತ್ತ "ಇಲ್ಲಿ ಬರುವ ಚೈತನ್ಯ, ಮುಕುಂದ, ಪ್ರೇಮಾನಂದ ಒಂದೊಂದು ಜೀವಂತ ವಿಶಿಷ್ಟ ಪಾತ್ರಗಳು. ಚೈತನ್ಯ ಸ್ನೇಹಮಯ, ನಿಷ್ಕಲಂಕ ಸೌಂದರ್ಯಪ್ರೇಮಿ, ವಿಚಾರಶೀಲ, ಆತನದು ಶುಷ್ಕವೈರಾಗ್ಯವಲ್ಲ. ತಾನು ಅದುವರೆಗೂ ಸ್ನೇಹದಿಂದಿದ್ದುದು ತನ್ನ ಪೂರ್ವಾಶ್ರಮದ ಮಡದಿಯೊಡನೆ ಎಂಬುದನ್ನರಿತಾಗಲೂ ಆತ ತೋರುವ ನಿರ್ಮಲ ಅಚಂಚಲ ನಿಷ್ಠೆ ಪ್ರಶಂಸನೀಯ. ಇಂದಿರೆಯ ಚಾತುರ್ಯ ಸಾಹಸ ಹಾಗೂ ಪ್ರಗಾಢವಾದ ಪತಿಪ್ರೇಮ ತುಂಬಾ ಮೆಚ್ಚುವಂಥವು. ಕೇವಲ ಕೆಲವೇ ಮಾತುಗಳ ಮೂಲಕ ಪ್ರೇಮಾನಂದರ ಮಾನವೀಯ ಅನುಕಂಪ, ಕರುಣಾಪೂರ್ಣ ಹೃದಯ ಮತ್ತು ವಿಶಾಲಗಂಭೀರ ಸ್ವಭಾವದ ಪರಿಚಯವಾಗುತ್ತದೆ".[೩] ಎಂಬ ಅಭಿಪ್ರಾಯ ಸಮರ್ಥನೀಯವಾಗಿದೆ.

'ಆರಾಣೆ ಮೂರು ಕಾಸು' ಕತೆಯಲ್ಲಿ ಬರುವ ಉಪಕಾರ ಮರೆಯದ ನವಾಬ್‌ಸಿಂಗನ ಪಾತ್ರ ಓದುಗರ ಮನಸ್ಸಿನಿಂದ ಮರೆಯಾಗುವುದಿಲ್ಲ. ಉಪಕಾರ ಮಾಡುವ ನೆಪದಿಂದ ದೊಡ್ಡಸ್ತಿಕೆಯನ್ನು ಮೆರೆಯುವ ಮಾಧವರಾಯರ ಸ್ವಭಾವ ನಮ್ಮ ಸಮಾಜದಲ್ಲಿರುವ ಹಲವು ಜನ ಶ್ರೀಮಂತರ ಅಹಂಕಾರದ ಸ್ವಭಾವವನ್ನು ತಿಳಿಸುತ್ತದೆ. ಹಾಗೆಯೇ ಕುವೆಂಪು ಅವರು ಮಾನವನ ಬಾಳಿನಲ್ಲಿ ಯಾವುದೋ ಅಗೋಚರವಾದ ಶಕ್ತಿಯ ಕೈವಾಡ (ವಿಧಿ) ಇರುವುದನ್ನು ಕತೆಯಲ್ಲಿ ನಿರೂಪಿಸುತ್ತಾರೆ. ನವಾಬ್‌ಸಿಂಗ್‌ನಿಗೆ ಬಂದ ಬಡತನದ ದುಃಸ್ಥಿತಿ, ಮಾಧವರಾಯರನ್ನು ಬೇಡುವ ಬಗೆಯನ್ನು ಕತೆಯಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿದೆ. "ಇನ್ನೇನು ರೈಲು ಹೊರಡಬೇಕು. ನವಾಬ್‌ಸಿಂಗನು ನಾನು ಕೂತಿದ್ದ ಗಾಡಿಗೆ ಬಂದು ಸ್ವಾಮಿ ಒಂದು ಮೂರು ಕಾಸು ಕೊಡಿ. ಮಕ್ಕಳಿಗೆ ಕಡಲೆ ತೆಗೆದುಕೊಡುತ್ತೇನೆ. ಎಂದು ಮಾರುದ್ದ ದೇಹವನ್ನು ಗೇಣುದ್ದ ಮಾಡಿಕೊಂಡನು."[೪] ಎಂಬ ಮಾತುಗಳಲ್ಲಿ ಅಧಿಕಾರ, ಸಂಪತ್ತು ಮಾನವನ ಬಾಳಿನಲ್ಲಿ ಶಾಶ್ವತವಾಗಿ ಇರುವುದಿಲ್ಲ. ಉತ್ತಮವಾದ ಗುಣ, ಉಪಕಾರ ಸ್ಮರಣೆ ಮುಖ್ಯ ಎಂಬ ಸತ್ಯವನ್ನು ಕಥೆಗಾರರು ತಿಳಿಸಿದ್ದಾರೆ. ನವಾಬ್‌ಸಿಂಗನು ತನಗೆ ಕಷ್ಟ ಬಂದಾಗ ಸಹಾಯ ಮಾಡಿದವರನ್ನು ಮರೆಯದೆ ಸಾಲವನ್ನು ತೀರಿಸುವ ಪ್ರಾಮಾಣಿಕತೆ, ಕಷ್ಟವನ್ನು ಸಹನೆಯಿಂದ ಎದುರಿಸುವ ತಾಳ್ಮೆ, ಕೃತಜ್ಞತೆ ಈ ಗುಣಗಳಿಂದ ಓದುಗರ ಮೆಚ್ಚುಗೆಗೆ ಪಾತ್ರವಾಗುತ್ತಾನೆ.

ಕುವೆಂಪು ಅವರ ಕಥೆಗಳಲ್ಲಿ ವೈವಿಧ್ಯಮಯವಾದ ಪಾತ್ರಗಳನ್ನು ಕಾಣಬಹುದಾಗಿದೆ. 'ಯಾರೂ ಅರಿಯದ ವೀರ' ಕಥೆಯಲ್ಲಿ ಬರುವ ಸುಬ್ಬಣ್ಣ ಗೌಡರ ಮನೆಯ ಆಳು ಲಿಂಗನ ತ್ಯಾಗ, ನಿಸ್ವಾರ್ಥ ಸೇವೆ, ಅನ್ನ ಆಶ್ರಯವನ್ನು ಕೊಟ್ಟು ಕಾಪಾಡಿದ ತನ್ನ ಒಡೆಯರ ಬಗ್ಗೆ ಇಟ್ಟುಕೊಂಡಿರುವ ಕೃತಜ್ಞತೆ, ಸುಬ್ಬಣ್ಣಗೌಡರ ಹೃದಯವಂತಿಕೆ ಓದುಗರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುತ್ತವೆ. ಲಿಂಗನ ಬಡತನ, ಅಸಹಾಯಕತೆ, ಜೀತದಾಳುವಿನ ನೋವು ಈ ಎಲ್ಲ ಸಂಗತಿಗಳು, ಕತೆಯಲ್ಲಿ ಹೃದಯ ಸ್ಪರ್ಶಿಯಾಗುವಂತೆ ಮೂಡಿಬಂದಿವೆ.

" 'ಯಾರೂ ಅರಿಯದ ವೀರ' ಸುಬ್ಬಣ್ಣಗೌಡರ ಮನೆಯ ಆಳು ಲಿಂಗ. ಅವನ ತ್ಯಾಗ ಮನುಷ್ಯ ಸಾಧಾರಣರಿಗೆ ನಿಲುಕುವಂತಹದಲ್ಲ. ನದಿಯ ನೀರಿನಲ್ಲಿ ತನ್ನ ಒಡೆಯನ ಸಂಸಾರ ಮುಳುಗಿ ಹೋಗುವುದೆಂದು ಅರಿತು ನಾಲೆಗೆ ಭಾರವನ್ನು ಕಡಿಮೆ ಮಾಡಲಿಕ್ಕೆಂದು ತುಂಬಿದ ನದಿಗೆ ಹಾರಿದ ವೀರನಾತ. ದೇವನ ಅವತಾರವೆನಿಸುವ ಯಾವ ರಾಮಕೃಷ್ಣರು ಈ ಲಿಂಗನ ಮುಂದೆ ಹಿರಿಯರೆಂದು ನಮಗೆ ತೋರಿಯಾರು? ತಮ್ಮನಿಗಾಗಿ ರಾಜ್ಯ ತೊರೆಯಬಹುದು, ಭಕ್ತನಿಗಾಗಿ ಸಾರಥ್ಯವಹಿಸಬಹುದು. ಆದರೆ ಒಡೆಯನಿಗಾಗಿ ಜೀವ ಕೊಡುವ ವ್ಯಕ್ತಿಯ ಮಹಿಮೆಯೇನೂ ಕಡಿಮೆಯಿಲ್ಲ. ಇಂಥ ಮಹಿಮಾನ್ವಿತ ಪಾತ್ರಗಳನ್ನು ಸೃಷ್ಟಿಸುವ ಕವಿ ಹೃದಯವೂ ಕೂಡ ಅಷ್ಟೇ ಉನ್ನತವಾಗಿರಬೇಕಾಗುವುದು"[3] ಎಂಬುದಾಗಿ ಮಿರ್ಜಿ ಅಣ್ಣಾರಾಯ ಅವರು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಅವರ ಅಭಿಪ್ರಾಯವನ್ನು ಒಪ್ಪಬಹುದಾಗಿದೆ.

ಲಿಂಗ ಕಾಣದಾದಾಗ 'ನಮ್ಮ ಮನೆಯ ಒಂದು ಬೆಳಕೇ ಹೋಯಿತು'[4] ಎಂದು ಮರುಗುವ ಸುಬ್ಬಣ್ಣಗೌಡರ ಉದ್ಗಾರದಲ್ಲಿ ನಿರ್ಮಲ ಅಂತಃಕರಣವೊಂದರ ಮಿಡಿತವಿದೆ. ಇದೇ ಸಂಸ್ಕಾರ ಅವರ ಕುಟುಂಬದಲ್ಲಿ ಅನುರಣಿತವಾಗುವುದನ್ನು ನಾವು ಕಾಣುತ್ತೇವೆ. ತಂದೆಯನ್ನು ಕಳೆದುಕೊಂಡು ಅತ್ಯಂತ ದುಃಖದಿಂದ ಕಣ್ಣೀರು ಸುರಿಸುತ್ತ ಅಳುತ್ತಿದ್ದ ನಾಗನನ್ನು ತಿಮ್ಮು ಸೀತೆ ಇಬ್ಬರೂ ಸಮಾಧಾನ ಪಡಿಸಿದ ಬಗೆ ಓದುಗರ ಮನ ಮಿಡಿಯುವಂತಿದೆ. "ಸೀತೆ ಅಳಬೇಡ, ನಾಗ ಅಪ್ಪ ಬರ‍್ತಾನೆ ಬಂದು ಅವನ ಕಣ್ಣೀರು ಒರೆಸಿದಳು. ನಾಗ ಬಿಕ್ಕಿ ಬಿಕ್ಕಿ ಅತ್ತ. ತಿಮ್ಮು ಲಿಂಗ ಬರ‍್ತಾನೋ ನಾಗ ಅಳೋದ್ಯಾಕೋ ? ಸುಮ್ಮನಿರೋ ಎಂದು ಸಂತೈಸುತ್ತಿದ್ದ."[5] ದುಃಖಿತರ ಬಗ್ಗೆ ಮುಗ್ಧ ಮಕ್ಕಳು ತೋರುವ ಕರುಣೆ, ಪ್ರೀತಿ ಮಹತ್ವದ್ದಾಗಿದೆ. ಈ ಎಲ್ಲ ಪಾತ್ರಗಳು ತಮಗರಿವಿಲ್ಲದಂತೆಯೇ ನಮ್ಮ ಸಂಸ್ಕೃತಿಯ ಪ್ರತಿಬಿಂಬಗಳಾಗಿದ್ದಾರೆ. ಹೀಗೆ ಅಂತಸ್ತುಗಳ ಗಡಿದಾಟಿ, ಮೆರೆಯುವ, ಮಾನವ ಸಂಬಂಧಗಳ ಶ್ರೀಮಂತಿಕೆಯನ್ನು 'ಯಾರೂ ಅರಿಯದ ವೀರ' ಕಥೆ ಅತ್ಯಂತ ಹೃದಯಸ್ಪರ್ಶಿಯಾಗಿ ನಿರೂಪಿಸುತ್ತದೆ. ಕುವೆಂಪು ಅವರ ಮಾನವೀಯ ಪರವಾದ ಕಾಳಜಿ ಕತೆಯ ಪಾತ್ರಗಳಲ್ಲಿ ವ್ಯಕ್ತವಾಗಿದೆ.

'ದೆವ್ವದ ಕಾಟ' ಕತೆಯಲ್ಲಿ ಕುವೆಂಪು ಅವರು ಮುತ್ತಣ್ಣನ ಪಾತ್ರದ ಮೂಲಕ ಮನುಷ್ಯನಲ್ಲಿರುವ ಸಣ್ಣತನ, ಸ್ವಾರ್ಥ, ನೀಚಬುದ್ಧಿ, ಕೃತಜ್ಞತೆಯಿಲ್ಲದಿರುವುದು, ಹಣದಾಸೆ, ಅಧಿಕಾರದಾಸೆ ಮತ್ತು ಕುತಂತ್ರಗಳನ್ನು ಪರಿಣಾಮಕಾರಿಯಾಗಿ ತಿಳಿಸಿದ್ದಾರೆ. ನಮ್ಮ ಸಾಮಾಜಿಕ ಬದುಕಿನ ನಂಬಿಕೆ ವಿಶ್ವಾಸಗಳನ್ನು ಪದರ ಪದರವಾಗಿ ವಿಡಂಬನಾತ್ಮಕವಾಗಿ ತಿಳಿಸಿರುವುದನ್ನು ಕಾಣಬಹುದಾಗಿದೆ.

'ಶ್ರೀಮನ್ಮೂಕವಾಗಿತ್ತು' ಕಥೆಯಲ್ಲಿ ಭಾರತೀಯ ಕೃಷಿಕ ತನ್ನ ಜೀವನ ದ್ರವ್ಯವಾದ ದನಕರುಗಳ ಬಗೆಗಿನ ವ್ಯಾಮೋಹವನ್ನು ಯಾವ ಮಟ್ಟದಲ್ಲಿ ಬಳಸಿಕೊಂಡಿರುತ್ತಾನೆ ಎಂಬುದನ್ನು ರಂಗನ ಪಾತ್ರದ ಮೂಲಕ ಚಿತ್ರಿಸಿದ್ದಾರೆ. ರೈತ ತನ್ನ ಬದುಕಿಗೆ ಆಧಾರವಾಗಿರುವ ಭೂಮಿ, ಮನೆ, ದನಕರುಗಳ ಬಗೆಗೆ ಭಾವನಾತ್ಮಕ ಸಂಬಂಧವನ್ನಿರಿಸಿಕೊಂಡಿರುತ್ತಾನೆ. ತನ್ನ ಜೀವನದಷ್ಟೇ ಆಸೆಯನ್ನು ಅವರ ಮೇಲೆ ಹೊಂದಿರುತ್ತಾನೆ. ರಂಗ ಬೆಳಗಿನಿಂದ ಸಂಜೆಯವರೆಗೂ ದುಡಿದು ಬಂದು ಸಾಕಾಗಿ ಊಟಕ್ಕೆ ಕುಳಿತು ತುತ್ತನ್ನು ಮೇಲಕ್ಕೆ ಎತ್ತಬೇಕು. ಅಷ್ಟರಲ್ಲಿ ಎಮ್ಮೆ ಕರು ತನ್ನ ಹಸಿವನ್ನು ಕೂಗಿ ಹೇಳುತ್ತದೆ. ರಂಗ ಕೂಡಲೇ ಎದ್ದು ಕೊಟ್ಟಿಗೆಗೆ ಬಂದು ನೋಡಿದರೆ ಎಳೆಗರು ಅರಚುತ್ತಿದೆ. ಎಮ್ಮೆ ಕೊಟ್ಟಿಗೆಗೆ ಬಂದಿರಲಿಲ್ಲ. ರಂಗ

ಎಮ್ಮೆಗಾಗಿ ಏನೆಲ್ಲ ಕಷ್ಟಪಡುತ್ತಾನೆ. ಕತ್ತಲಲ್ಲಿ ತನ್ನ ಜೀವದ ಹಂಗನ್ನು ತೊರೆದು, ಮಳೆಯಲ್ಲಿ ಕಾಡು, ಬೆಟ್ಟಗಳಲ್ಲಿ ಸುತ್ತುತ್ತಾನೆ. ಜಿಗಣೆಗಳ ಕಾಟವನ್ನು ಸಹಿಸಿಕೊಳ್ಳುತ್ತಾನೆ. ಎಮ್ಮೆಗಾಗಿ ಸುತ್ತಿ ಬಸವಳಿದು ಕಡೆಗೆ ನಾಗಣ್ಣಗೌಡರ ಮನೆಯಲ್ಲಿ ಎಮ್ಮೆಯನ್ನು ಕಾಣುತ್ತಾನೆ. ಅಲ್ಲಿ ಬಾಲಕ ವಾಸು ಜ್ವರದಿಂದ ನರಳುತ್ತಿರುತ್ತಾನೆ. ಅವನ ಸ್ಥಿತಿ ಗಂಭೀರವಾಗಿರುತ್ತದೆ. ನಾಗಣ್ಣಗೌಡರು ಮಗನ ಜೀವ ಉಳಿಸಲು ಆತಂಕದಿಂದ ಪ್ರಯತ್ನಿಸಿದ್ದರೆ, ಎಮ್ಮೆ ಕರುವಿನ ಜೀವ ಉಳಿಸಲು ರಂಗ ತವಕಿಸುತ್ತಾನೆ. ಮುಗ್ಧ ಬಾಲಕ ವಾಸುವಿನ ಮನಸ್ಸಿನಲ್ಲಿಯು ಮೂಕ ಪ್ರಾಣಿಗಳ ಬಗ್ಗೆ ಅಪಾರ ಕರುಣೆಯಿರುವುದನ್ನು ಕುವೆಂಪು ಹೃದಯ ಸ್ಪರ್ಶಿಯಾಗಿ ಚಿತ್ರಿಸಿದ್ದಾರೆ. "ಪಾಪ ಎಳೆಗರು ಎಮ್ಮೆ ಹೊಡಕೊಂಡು ಹೋಗೋ ನೀನು ರಂಗಾ ಎಂದ."[6] ವಾಸುವಿನ ಬಾಯಿಂದ ಈ ಮಾತನ್ನು ಕೇಳಿಸಿಕೊಂಡ ರಂಗ ಮನದಲ್ಲಿಯೇ ವಾಸುವನ್ನು ಉಳಿಸುವಂತೆ ದೇವರಲ್ಲಿ ಪ್ರಾರ್ಥಿಸುತ್ತಾನೆ. ಕುವೆಂಪು ಅವರು ಪ್ರಸ್ತುತ ಕತೆಯಲ್ಲಿ ರಂಗ ಮತ್ತು ವಾಸು ಇಬ್ಬರ ಪಾತ್ರವು ಓದುಗರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುವಂತೆ ಚಿತ್ರಿಸಿದ್ದಾರೆ.

'ನನ್ನದೇವರು' ಕತೆಯಲ್ಲಿ ವಿಧವೆಯ ಮನದಾಳದ ಅನುರಾಗಭಾವನೆಗಳು, ಯೌವನದ ಕಾಲಘಟ್ಟದಲ್ಲಿ ಪತಿಯನ್ನು ಕಳೆದುಕೊಂಡು ಸುಖಭೋಗಗಳಿಂದ ವಂಚಿತಳಾಗಬೇಕಾದುದು, ಮನದ ಪಾಪ ಪುಣ್ಯಗಳ ಸಂಘರ್ಷ ಈ ಎಲ್ಲಾ ಸಂಗತಿಗಳು ಸಹಜವಾಗಿ ಮೂಡಿ ಬಂದಿವೆ. ವಿಧವೆಯ ಮನದಲ್ಲಿ ತುಡಿಯುತ್ತಿದ್ದ ಅನುರಾಗ ಭಾವನೆಗಳು, ಅವಳು ತನ್ನ ಭಾವನನ್ನು ಕಂಡು ಮೋಹವಶಳಾದ ಸಂದರ್ಭವನ್ನು ಕುವೆಂಪು ಅವರು ಓದುಗರ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. "ಅವರು ಕುಳಿತು ಸುತ್ತಲೂ ನೋಡುತ್ತ ಮನೋಹರವಾಗಿ ಹಾಡಿದರು. ಆ ಸವಿದನಿ ನನ್ನೆದೆಯಲ್ಲಿ ಒಳಸಂಚುಗಳನ್ನು ನೆಯ್ಯತೊಡಗಿತು. ಆ ಹೊಂಬಿಸಿಲಿನಲ್ಲಿ ಅವರ ಸುಂದರ ಮೂರ್ತಿ ಸುಂದರತರವಾಗಿ ಕಂಗೊಳಿಸಿತು. ಮುಖದ ಜ್ಯೋತಿ ಇಮ್ಮಡಿಯಾದಂತಿತ್ತು. ನೀಳವಾದ ಮುಂಗುರುಳಿನ ಕೇಶರಾಶಿ ಸಂಜೆಯ ಗಾಳಿಯಲ್ಲಿ ಎದೆಯನ್ನು ಕೆಣಕುವಂತೆ ನರ್ತಿಸುತ್ತಿತ್ತು. ಆ ದಿನ ಆ ಮಂಗಲ ಸಂಧ್ಯೆಯ ಪಿಂಗಲ ಶೋಭೆಯಲ್ಲಿ, ಮರಗಳ ಮರೆಯಲ್ಲಿ ಕದ್ದು ನಿಂತು ನೋಡುತ್ತಿದ್ದ ನನಗೆ ಅವರು ಆಗತಾನೆ ಅಗ್ನಿಸ್ನಾನ ಮಾಡಿಕೊಂಡು ಹೊರಗೆ ಬಂದ ದೇವಮೂರ್ತಿಯಂತೆ ರಾರಾಜಿಸಿದರು. ನನ್ನ ಮನಸ್ಸು ಅವರ ಸೌಂದರ್ಯಕ್ಕೆ ಸೋತು ಮುಗ್ಧವಾಯಿತು. ಅವರಲ್ಲಿ ಅದುವರೆಗೆ ನನಗಿದ್ದ ಭಕ್ತಿ ಛದ್ಮವೇಷದ ಪ್ರೇಮವೆಂದು ಭಾಸವಾಯಿತು. ನಾನು ಹೆದರಿ ನಡುಗಿದೆ. ಹಾಗೆಯೇ ಹಿಂದಿರುಗಿ ಏನೋ ಭಯಂಕರವಾದುದನ್ನು ಕಂಡು ಅದರಿಂದ ತಪ್ಪಿಸಿಕೊಂಡು ಓಡಿಬರುವವಳಂತೆ ಮನೆಗೆ ಬಂದೆ."[7] ಹರೆಯದ ಹೆಣ್ಣಿನ ಮನದಲ್ಲಿರುವ ಅನುರಾಗ ಭಾವನೆಗಳ ತುಡಿತ, ಕಾಮನೆಗಳು ಸಹಜವಾಗಿ ಮೂಡಿಬಂದಿವೆ. ಸಮಾಜದ ಮೇಲೆ ನಿಯಮಗಳಿಗನುಸಾರವಾಗಿ ಸಂಪ್ರದಾಯದ ಚೌಕಟ್ಟಿಗೆ ಬದ್ಧವಾಗಿರಬೇಕಾದ, ಅದಕ್ಕನುಸಾರವಾಗಿ ಬಾಳಬೇಕಾದ ಅನಿವಾರ್ಯತೆ ವಿಧವೆಗೆ ಇರುವುದರಿಂದ ತನ್ನ ಕಾಮನೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಾಳೆ.

ಆಕೆಯ ಭಾವನ ನಿರ್ಮಲ ಪ್ರೇಮ, ಹೃದಯವಂತಿಕೆ, ಉನ್ನತ ಚಾರಿತ್ರ್ಯ ಓದುಗರಲ್ಲಿ ಬೆರಗನ್ನುಂಟು ಮಾಡುತ್ತವೆ. ನಾದಿನಿಯ ಬಗ್ಗೆ ಆತ ತೋರುವ ಅನುಕಂಪ, ಸಹಾನುಭೂತಿ ಸಹಾಯಗಳು ಅವನ ಮಾನವ ಪ್ರೇಮದ ಸಂಕೇತಗಳಾಗಿವೆ. ನಾದಿನಿಯ ಮನೋಗತ ಅರಿವಾದರೂ ಅದಕ್ಕೆ ಆಸ್ಪದ ಕೊಡದೆ ಅವಳ

ಮನಸ್ಸನ್ನು ಪರಿವರ್ತನೆ ಮಾಡಲು ಯತ್ನಿಸಿದ್ದು, ಜ್ಞಾನದ ಬೆಳಕನ್ನು ಹರಡಲು ಯತ್ನಿಸಿದ್ದು ಅವನ ಬ್ರಹ್ಮಚರ್ಯದ ಗುಣ ಪವಿತ್ರ ಆದರ್ಶವೆನ್ನುವುದನ್ನು ಸ್ಪಷ್ಟಪಡಿಸಿ ಓದುಗರ ಮೆಚ್ಚುಗೆಗೆ ಪಾತ್ರವಾಗುತ್ತದೆ. ನಾದಿನಿ ಸಹಜ ಭಾವರಾಗಗಳಿಗೆ ವಶವರ್ತಿಯಾದುದನ್ನು ಅರಿತರೂ ಅದನ್ನು ಮಹಾಪರಾಧವೆಂದು ಗಣಿಸಿ ಗುಲ್ಲೆಬ್ಬಿಸಿ ಅವಳ ಹೃದಯವನ್ನು ಭಗ್ನಗೊಳಿಸುವ ಅಕಾರ್ಯಕ್ಕೆ ತೊಡಗದೆ ಮೌನವಾಗಿಯೇ ಅವಳ ಮನಃಪರಿವರ್ತನೆಗೆ ಪ್ರಯತ್ನಿಸುತ್ತಾನೆ. ಇದು ಅವನ ಪಾತ್ರಕ್ಕೆ ಮತ್ತಷ್ಟು ಗಾಂಭೀರ್ಯವನ್ನು ಗೌರವವನ್ನು ನೀಡುತ್ತದೆ.

ಕುವೆಂಪು ಅವರ 'ಸಾಲದ ಮಗು' ಕಥೆ ಜೀತ ಪದ್ಧತಿಯ ದಾರುಣತೆಯನ್ನು ಕರುಳು ಮಿಡಿಯುವಂತೆ ಚಿತ್ರಿಸುತ್ತದೆ. ನವೋದಯ ಕಾಲಘಟ್ಟದಲ್ಲಿ ಜೀತಪದ್ಧತಿ, ಶೋಷಣೆ, ದಲಿತರ ದಾರುಣವಾದ ಬದುಕು ಇವುಗಳ ಬಗೆಗೆ ಗಟ್ಟಿಧ್ವನಿ ಎತ್ತಿದವರು ಕುವೆಂಪು ಅವರು. ಹಾಗಾಗಿಯೇ ಕುವೆಂಪು ಅವರು ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಮಹತ್ವದ ಕವಿಗಳಾಗಿ, ಲೇಖಕರಾಗಿ ಕಂಡು ಬರುತ್ತಾರೆ. ಸಮಾಜದ ವಾಸ್ತವ ಬದುಕಿನ ಅನುಭವದ ತೀವ್ರತೆಯನ್ನು ಅವರ ಕತೆಗಳಲ್ಲಿ ಕಾಣುತ್ತೇವೆ. ಪ್ರಸ್ತುತ ಕಥೆಯಲ್ಲಿ ದೈನ್ಯತೆ, ಕ್ರೌರ್ಯಗಳ ಮುಖಾಮುಖಿಯನ್ನು ತುಂಬ ತೀವ್ರ ರೀತಿಯಲ್ಲಿ ಚಿತ್ರಿಸಲಾಗಿದೆ.

ಸುಬ್ಬ ತಂದೆ ತಾಯಿಯನ್ನು ಕಳೆದುಕೊಂಡ ಅನಾಥ ಬಾಲಕ. ತಂದೆ ಮಾಡಿದ್ದ ಸಾಲಕ್ಕಾಗಿ ಗೌಡರು ಸುಬ್ಬನನ್ನು ಜೀತದಾಳನ್ನಾಗಿ ಮಾಡಿಕೊಂಡು ಸ್ವಲ್ಪವೂ ದಯೆಯಿಲ್ಲದೆ ಎಂಟು ವರ್ಷದ ಚಿಕ್ಕ ವಯಸ್ಸಿನ ಬಾಲಕನ ಮೇಲೆ ಅತಿಶ್ರಮದ ಕೆಲಸಗಳನ್ನು ಹೇರುವುದು, ಮನ ಬಂದಂತೆ ಬೈದು ಬಡಿಯುವುದೂ ನಿತ್ಯವು ನಡೆಯುತ್ತಿತ್ತು. ಈ ಕಥೆಯಲ್ಲಿ ಬರುವ ಗೌಡರು ನಿಷ್ಠುರ ನಿಷ್ಕರುಣೆಗಳ ಅಮಾನುಷ ಮೂರ್ತಿಯಾಗಿದ್ದಾರೆ. ಕೊರೆವ ಚಳಿಯಲ್ಲಿ ಸುರಿಯುವ ಮಳೆಯಲ್ಲಿ ಯಾರೋ ದಾನ ಮಾಡಿದ ಚಿಂದಿ ಕಂಬಳಿಯನ್ನು ಹೊಡೆದು ಸುರುಬಿ ಬಿದ್ದಿದ್ದ ಅನಾಥ ಬಾಲಕನನ್ನು ಬೆತ್ತದಿಂದ ಥಳಿಸುತ್ತಾರೆ. ಜ್ವರದಿಂದ ಬಳಲುತ್ತಿದ್ದ ಸುಬ್ಬನನ್ನು ಪ್ರಚಂಡ ಮಳೆಗಾಳಿಗಳ ಕಗ್ಗತ್ತಲಲ್ಲಿ ಮೀನಿಗಾಗಿ ಹಾಕಿದ್ದ ಕೂಣಿಯನ್ನು ತರುವಂತೆ ಅಟ್ಟುತ್ತಾರೆ.

ಗೌಡರ ಬೆತ್ತದ ಏಟುಗಳಿಂದ ಚೀರಾಡುವ ಸುಬ್ಬನ ಬಗೆಗೆ ಓದುಗರ ಹೃದಯ ಮರುಗುತ್ತದೆ. "ಗೌಡರು ಬೆತ್ತದಿಂದ ರಪ್ಪ ರಪ್ಪನೆ ಹೊಡೆದಾಗ ಅವನು ಚೀರಿ ಹಾರಿಬಿದ್ದನು. ಕಣ್ದೆರೆದು ನೋಡಿದರೆ ಲಾಟೀನಿನ ಬೆಳಕಿನಲ್ಲಿ ಗೌಡರ ರುದ್ರಮೂರ್ತಿ ! ಸುಬ್ಬ ಅಯ್ಯೋ ! ದಮ್ಮಯ್ಯ ! ಎಂದು ಸುತ್ತಿದ್ದ ಕಂಬಳಿಯನ್ನು ಬೇಗ ಬೇಗನೆ ಬಿಚ್ಚಿಕೊಂಡು ಎದ್ದನು."[10] ಅನಾಥ ಬಾಲಕನಾದ ಸುಬ್ಬನ ಅಸಹಾಯಕತೆ, ನಿರ್ದಯತೆಯಿಂದ ಕೂಡಿದ ಗೌಡರ ಕ್ರೌರ್ಯ, ಶೋಷಣೆ ಕಣ್ಣಿಗೆ ಕಟ್ಟುವಂತೆ ಮೂಡಿ ಬಂದಿದೆ. ಸುಬ್ಬನ ಪಾತ್ರ ಚಿತ್ರಣ ದಲಿತ ವರ್ಗದ ಶೋಷಣೆ, ನೋವುಗಳಿಗೆ ಪ್ರತೀಕವಾಗಿ ಮೂಡಿಬಂದಿದೆ.

ಗೌಡರ ಸ್ವಾರ್ಥ, ನಿಷ್ಕರುಣೆ ಅಮಾನುಷ ನಡವಳಿಕೆಯನ್ನು ವ್ಯಂಗ್ಯ ಬೆರೆತ ಹಾಸ್ಯದ ಧ್ವನಿಯಲ್ಲಿ ಚಿತ್ರಿಸಲಾಗಿದೆ. "ಗೌಡರು ಮನೆಯ ಯಜಮಾನರು, ಶ್ರೀಮಂತರು. ಆ ಗ್ರಾಮಕ್ಕೆಲ್ಲಾ ಒಡೆಯರು. ಕಠೋರ ಸ್ವಭಾವದವರು. ಅವರಿಗೆ ವಯಸ್ಸು ಅರವತ್ತರ ಮೇಲಾಗಿತ್ತು. ಮೂರು ಮದುವೆಗಳಾಗಿದ್ದುವು. ನಾಲ್ಕೈದು

ಮನೆತನಗಳಿಗೆ ಹೆಚ್ಚು ಬಡ್ಡಿಯ ಮೇಲೆ ಸಾಲದ ಕೊಟ್ಟು ಅವುಗಳನ್ನು ಹಾಳು ಮಾಡಿದ್ದರು. ಅವರನ್ನು ಕಂಡರೆ ಎಲ್ಲರಿಗೂ ಹುಲಿಯನ್ನು ಕಂಡಂತೆ ಭೀತಿ. ನಿತ್ಯವೂ ಶಿವಪೂಜೆ ಮಾಡುವರು. ಅವರು ತಮ್ಮ ಕೋಣೆಯೊಳಗೆ ಕುಳಿತು ಬ್ರಾಂದಿ ಕುಡಿಯುವಾಗ ಅದನ್ನು ಶೀಸೆಯಿಂದ ಗ್ಲಾಸಿಗೆ ಹಾಕುತ್ತಾ, ಹೊರಗಿನವರು ತಾನು ದೇವರ ಧ್ಯಾನದಲ್ಲಿರುವೆನೆಂದು ತಿಳಿದುಕೊಳ್ಳಲಿ ಎಂದೂ, ಅವರಿಗೆ ಶೀಸೆಯ ಮುಚ್ಚಳ ತೆಗೆಯುವ ಸದ್ದು ಬ್ರಾಂದಿ ಹೊಯ್ಯುವ ಸದ್ದೂ ಕೇಳಿಸಬಾರದೆಂದೂ "ಹರಿ ನಾರಾಯಣ ಹರಿನಾರಾಯಣ ಹರಿನಾರಾಯಣ ಎನು ಮನವೆ" ಎಂದು ಗಟ್ಟಿಯಾಗಿ ರಾಗದಿಂದ ಹೇಳುವರು. ಮಳೆಗಾಲದಲ್ಲಂತೂ ಬಹಳ ಹೆಚ್ಚಾಗಿ "ಹರಿನಾರಾಯಣ" ಮಾಡುತ್ತಿದ್ದರು."[೧೦] ಹೀಗೆ ಗೌಡರ ದರ್ಪದ ವ್ಯಕ್ತಿತ್ವದ ಪಾತ್ರ ಚಿತ್ರಣವನ್ನು ಮಾಡಲಾಗಿದೆ. ಕುವೆಂಪು ಅವರದು ಜಾತಿ, ಮತ, ಪೂರ್ವಾಗ್ರಹಗಳಿಂದ ದೂರವಾದ, ಉದಾರವಾದ ಆರೋಗ್ಯಕರ ಮನಸ್ಸು, ಹಾಗಾಗಿಯೇ ಇಂತಹ ಪಾತ್ರ ಚಿತ್ರಣ ಮಾಡಲು ಸಾಧ್ಯವಾಗಿದೆ. ಕುವೆಂಪು ಅವರ ಸಾಮಾಜಿಕ ಕಳಕಳಿ ಹಾಗೂ ಮಾನವೀಯ ಪರವಾದ ಮೌಲ್ಯಗಳ ಶೋಧನೆಗೆ ಪ್ರಸ್ತುತ ಕತೆ ಸಾಕ್ಷಿಯಾಗಿದೆ.

'ಮೀನಾಕ್ಷಿಯ ಮನೆ ಮೇಷ್ಟರು' ಕಥೆಯಲ್ಲಿ ಬರುವ ಮೇಷ್ಟರ ಪಾತ್ರ ಒಂದು ಅದ್ಭುತ ಸೃಷ್ಟಿ. ಮೇಷ್ಟರ ಪಾತ್ರದಲ್ಲಿ ಹೆಣ್ಣಿನ ಪ್ರೇಮದ ಸೆಳೆತಕ್ಕೆ ಸಿಕ್ಕಿದ ಗಂಡಿನ ಮನಸ್ಸಿನ ಒಳತೋಟಿಗಳ ಚಿತ್ರಣವಿದೆ. ಮೀನಾಕ್ಷಿಯನ್ನು ಹೇಗಾದರೂ ತನ್ನವಳನ್ನಾಗಿ ಮಾಡಿಕೊಳ್ಳಬೇಕೆನ್ನುವ ಹುಚ್ಚು ಕಲ್ಪನೆಯಿಂದ ಸಲ್ಲದ ಕಾರ್ಯಕ್ಕಿಳಿಯುತ್ತಾರೆ. ಮೀನಾಕ್ಷಿಯ ಪತಿಯನ್ನು ನೋಡಿದಾಗ ಅವರ ಸಜ್ಜನಿಕೆ, ಹೃದಯ ಶ್ರೀಮಂತಿಕೆ, ಪ್ರೀತಿಯ ಸತ್ಕಾರ ದೊರೆತಾಗ ಮೇಷ್ಟರ ಮನದಲ್ಲಿನ ಭಾವೋದ್ವೇಗ ಅಶಾಂತಿಯ ಬಿರುಗಾಳಿ ತಣ್ಣಗಾಗಿ ಮನಸ್ಸು ಪರಿವರ್ತನೆಯಾಗುತ್ತದೆ. ಕತೆಯಲ್ಲಿ ಮೇಷ್ಟರು ಶಿಷ್ಯಗೆ ಗುರುವೇ ಆಗಿ ಉಳಿದರೆಂಬುದನ್ನು ಸೂಚಿಸುವುದರ ಮೂಲಕ ಬದುಕಿನ ನಾನಾ ಸಂದರ್ಭಗಳಲ್ಲಿ ನಾವು ಬೆಳೆಸಿಕೊಳ್ಳಬೇಕಾದ ಮನೋಭಾವವನ್ನು ತಿಳಿಸಿಕೊಡುತ್ತದೆ. ಹೀಗಾಗಿಯೇ ಈ ಕಥೆ ಕುವೆಂಪು ಅವರ ಕಥೆಗಳಲ್ಲೇ ವಿಶಿಷ್ಟವಾಗಿದೆ.

ಮೀನಾಕ್ಷಿ ಪಾತ್ರ ಓದುಗರ ಮನದಲ್ಲಿ ಅಚ್ಚೊತ್ತಿ ನಿಲ್ಲುತ್ತದೆ. ಮೀನಾಕ್ಷಿ ಸ್ತ್ರೀ ಸಹಜವಾದ ಲಜ್ಜೆಯನ್ನು ಬೆಳೆಸಿಕೊಂಡಿರುವ ಮುಗ್ಧೆ, ಸರಳೆ, ಪ್ರಶಂಸಾಪ್ರಿಯಳು. ಆದರೆ ಮೇಷ್ಟರ ಬಗ್ಗೆ ನಿರ್ದಿಷ್ಟವಾದ ಏಕಾಗ್ರ ಪ್ರಣಯವೇನೂ ಮೊಳೆತಿರಲಿಲ್ಲ. ಆದ್ದರಿಂದಲೆ ತಂದೆ ತಾಯಿಗಳ ಆಯ್ಕೆಯಲ್ಲಿ ಅವಳಿಗೆ ಪೂರ್ಣಶ್ರದ್ಧೆ, ಮೀನಾಕ್ಷಿಯ ಪಾತ್ರದ ಬಗ್ಗೆ ಕಥೆಯಲ್ಲಿ ಆದ್ದರಿಂದಲೆ ಮುಕ್ಕಾಲು ಮೂರುವೀಸ ಪಾಲು ಸ್ತ್ರೀಯರು ತಮ್ಮ ಪಾಲಿಗೆ ಬಂದಿದ್ದರಲ್ಲಿ ತೃಪ್ತರಾಗಿ ತಮಗೂ ನೆಮ್ಮದಿ ತಂದುಕೊಳ್ಳುತ್ತಾರೆ. ಎಲ್ಲಿಯೊ ಸಾವಿರಕ್ಕೆ ಒಬ್ಬಿಬ್ಬರಿಗೆ ಮಾತ್ರ ಏಕಾಗ್ರತೆ ಇರುತ್ತದೆ. ಅಂತಹ ಏಕಾಗ್ರತೆಯಿಂದ ಮಾನವ ಜೀವನಕ್ಕೆ ಅನಂತ ಕಲ್ಯಾಣವೂ ಆಗುತ್ತದೆ. ತಪ್ಪಿದರೆ ಅಪಾರ ಕ್ಲೇಶವೂ ದೊರೆಯುತ್ತದೆ. ನಮ್ಮ ಮೀನಾಕ್ಷಿ ಅನಂತ ಕಲ್ಯಾಣಮಯಿಯೂ ಆಗಿರಲಿಲ್ಲ. ಅಪಾರ ಕ್ಲೇಶಕಾರಿಣಿಯೂ ಆಗಿರಲಿಲ್ಲ. ಸಾಧಾರಣ ಸ್ತ್ರೀಯಳಾಗಿದ್ದಳು. ಆದ್ದರಿಂದಲೆ ಉತ್ತಮ ಸ್ತ್ರೀಯೂ ಆಗಿದ್ದಳು. ಸಾಮಾನ್ಯ ದೈನಂದಿನ ಸಂಸಾರ ದೃಷ್ಟಿಯಿದ ಅತ್ಯುತ್ತಮಳೂ ಆಗಿದ್ದಳು."[೧೧] ಕಥೆಯು ವಸ್ತು, ಪಾತ್ರ ನಿರೂಪಣೆ, ಶೈಲಿ ಈ ಎಲ್ಲ ದೃಷ್ಟಿಯಿಂದ ಉತ್ತಮವಾಗಿದೆ. ಭಾರತೀಯ ಕೌಟುಂಬಿಕ ಜೀವನದ ಸಂಸ್ಕೃತಿಯನ್ನು ಕತೆಯಲ್ಲಿ ಬಿಂಬಿಸಲಾಗಿದೆ.

'ಧನ್ವಂತರಿಯ ಚಿಕಿತ್ಸೆ' ಕುವೆಂಪು ಅವರ ಉತ್ತಮ ಕಥೆಗಳಲ್ಲಿ ಒಂದಾಗಿದೆ. ರೈತನೇ ಕೇಂದ್ರಬಿಂದುವಾಗಿರುವ ಈ ಕಥೆಯಲ್ಲಿ ವಿಶ್ವಾಮಿತ್ರ, ಪರಶುರಾಮ, ಧನ್ವಂತರಿಯರು ಪ್ರಧಾನ ಪಾತ್ರವಹಿಸಿದರೂ ರೈತನ ಬಾಯಿಯಲ್ಲಿ ಒಂದೂ ಮಾತು ಬಂದಿಲ್ಲವಾದರೂ ರೈತನೆ ಮಹಾಮೌನ ಪಾತ್ರವಾಗಿದ್ದಾನೆ. ವಿಶ್ವಾಮಿತ್ರ ಮತ್ತು ಪರಶುರಾಮರ ಪಾತ್ರಗಳು ಸಮಾಜ ಸುಧಾರಕರ, ನವ ಸಮಾಜವನ್ನು ನಿರ್ಮಾಣ ಮಾಡುವವರ ಪ್ರತೀಕವಾಗಿ ಬಂದಿವೆ. ಆ ಪಾತ್ರಗಳ ಮೂಲಕ ಸಮಾಜ ಸೇವೆಗೆ ನಿಸ್ವಾರ್ಥ ಭಾವನೆ, ಮಾನವೀಯ ಕಾಳಜಿ ಮುಖ್ಯ ಎಂಬುದನ್ನು ಕುವೆಂಪು ಅವರು ತಿಳಿಸಿದ್ದಾರೆ. ಕಥೆಯಲ್ಲಿ ಹಸಿವು, ನೋವು, ಬಡತನ, ದಟ್ಟದಾರಿದ್ರ್ಯವನ್ನು ಹಾಸಿ ಹೊದ್ದುಕೊಂಡಿರುವ ಭಾರತೀಯ ರೈತನ ಚಿತ್ರಣವನ್ನು ಕುವೆಂಪು ಮನಮಿಡಿಯುವಂತೆ ಚಿತ್ರಿಸಿದ್ದಾರೆ. ರೈತನ ಶೋಷಣೆಗೆ ಅಧಿಕಾರಿಗಳು, ರಾಜಕಾರಣಿಗಳು, ಪುರೋಹಿತಶಾಹಿ ಹೀಗೆ ಎಲ್ಲ ವರ್ಗದವರು ಕಾರಣರಾಗಿದ್ದಾರೆ. ಕುವೆಂಪು ಅವರು ರೈತನ ಬಡತನ, ನೋವು, ದಯನೀಯವಾದ ಸ್ಥಿತಿಯನ್ನು ಚಿತ್ರಿಸುತ್ತ "ಗುಡಿಸಲಿನ ಒಳಗಡೆ ಮಬ್ಬುಗತ್ತಲೆ ಕವಿದಿತ್ತು. ಸರ್ವತ್ರವೂ ಹೊಗೆ ಹಿಡಿದು ಕರಿಬಲೆ ನೇತುಬಿದ್ದು ಕರ್‍ರಗಾಗಿತ್ತು. ಹಾರೆ, ಗುದ್ದಲಿ, ಹೆಡಗೆ, ಕುಕ್ಕೆ, ಮಡಕೆ, ನೇಗಿಲು, ಕತ್ತಿ ಇತ್ಯಾದಿ ಬೇಸಾಯದ ಉಪಕರಣಗಳು ಅಲ್ಲಲ್ಲಿ ಅಸ್ತವ್ಯಸ್ತವಾಗಿ ಚದುರಿ ಬಿದ್ದಿದ್ದವು. ನಿರ್ಜೀವವಾದ ಕಸಕಡ್ಡಿಗಳೂ ಸಜೀವವಾದ ನೊಣಗಳು ಸ್ವರಾಜ್ಯ ಸಂಪಾದನೆ ಮಾಡಿದಂತಿತ್ತು. ಮಧ್ಯೆ ಹಾಸಿದ್ದ ಕಂಬಳಿಯ ಮೇಲೆ ಕೊಳೆ ಹಿಡಿದ ಸೊಂಟದ ಪಂಚೆಯ ವಿನಾ ಸಂಪೂರ್ಣವಾಗಿ ನಗ್ನನಾಗಿದ್ದ ರೈತನೊಬ್ಬನು ಅಂಗಾತನೆ ಮಲಗಿ, ಎದೆಯನ್ನು ಎರಡು ಕೈಗಳಿಂದಲೂ ಒತ್ತಿಕೊಳ್ಳುತ್ತಾ ಘೋರವಾಗಿ ನರಳುತ್ತಿದ್ದನು."[13] ಕುವೆಂಪು ಅವರು ರೈತನ ಶೋಚನೀಯ ಸ್ಥಿತಿಯನ್ನು ಮನಕರಗುವಂತೆ ಚಿತ್ರಿಸಿದ್ದಾರೆ.

ಡಾ. ತಿಪ್ಪೇಸ್ವಾಮಿಯವರು 'ಧನ್ವಂತರಿಯ ಚಿಕಿತ್ಸೆ' ಕಥೆಯ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸುತ್ತ "ಧನ್ವಂತರಿಯ ಚಿಕಿತ್ಸೆಯಲ್ಲಿ ಮಾನವೀಯ ಅಂತಃಕರಣವೊಂದು ಸುಂದರ ಸುಖೀ ಸಮಾಜದ ನಿರ್ಮಾಣಕ್ಕಾಗಿ ತುಡಿಯುತ್ತಿರುವುದನ್ನು ಮೊದಲಿನಿಂದ ಕೊನೆಯವರೆಗೂ ಗುರುತಿಸಬಹುದಾಗಿದೆ. ತಮ್ಮ ಕಾಲದ ಶಾಸನ ವ್ಯವಸ್ಥೆಯ ಎಲ್ಲ ಅಸಾಂಗತ್ಯಗಳನ್ನು ಕುರೂಪಗಳನ್ನು ಅತ್ಯಂತ ವಾಸ್ತವವಾದಿ ನೆಲಗಟ್ಟಿನ ಮೇಲೆ ವ್ಯಂಗ್ಯಕ್ಕೆ ಗುರಿ ಮಾಡಿರುವ 'ಧನ್ವಂತರಿಯ ಚಿಕಿತ್ಸೆ' ಕನ್ನಡ ಕಥಾಲೋಕದ ಮೇರುಶೃಂಗ"[14] ಎಂಬುದಾಗಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಅವರ ಅಭಿಪ್ರಾಯ ಅತ್ಯಂತ ಸಮರ್ಥನೀಯವಾಗಿದೆ.

ಕುವೆಂಪು ಅವರ ಹದಿನೇಳು ಕಥೆಗಳಲ್ಲಿ ಬರುವ ಪಾತ್ರಗಳು ವಿಪುಲ ಸಂಖ್ಯೆಯಲ್ಲಿದ್ದು ವೈವಿಧ್ಯತೆಯಿಂದ ಕೂಡಿದೆ. ಯಾವುದೇ ಪಾತ್ರವನ್ನು ಚಿತ್ರಿಸಿದರೂ ರೂಪ ಕೂಡ ಲೇಖಕರ ಪೂರ್ಣ ನೋಟವಿರುತ್ತದೆ. ಒಂದು ಪಾತ್ರವನ್ನು ಕಥೆಗೆ ಅರೆಕೊರೆಯಾಗಿ ತಂದು ನಡುವೆಯೇ ಕೈ ಬಿಡುವ ಸ್ವಭಾವ ಕಥೆಗಾರರಲ್ಲಿ ಕಂಡುಬರುವುದಿಲ್ಲ. ಕುವೆಂಪು ಅವರ ಬದುಕಿನ ಅನುಭವ, ಧ್ಯೇಯದ ಪ್ರಭಾವ ಹಾಗೂ ಕಲಾತ್ಮಕತೆಯನ್ನು ಕತೆಗಳ ಪಾತ್ರ ಚಿತ್ರಣದಲ್ಲಿ ಕಾಣಬಹುದಾಗಿದೆ. ಪಾತ್ರ ನಿರ್ಮಿತಿಯಲ್ಲಿ ಪೂರ್ಣದೃಷ್ಟಿಯಿದೆ. ಇದು ಕುವೆಂಪು ಅವರ ವೈಶಿಷ್ಟ್ಯವಾಗಿದೆ. ಹಾಗಾಗಿಯೆ ಕನ್ನಡ ಸಾಹಿತ್ಯದಲ್ಲಿ ಅವರಿಗೆ ಹಿರಿಯ ಸ್ಥಾನವಿದೆ.

ಆದರ್ಶವನ್ನು ಕೈ ಬಿಡದ ರಮೇಶ, ಆದರ್ಶಚ್ಯುತನಾದ ಯೋಗಿನ್, 'ಆದರ್ಶ ಸಾಧನೆ' ಕಥೆಯ ನಾಯಕ ಗಳಿಗೆಗೊಮ್ಮೆ ಬಣ್ಣ ಬದಲಾಯಿಸುವ ಖೋಟಾ ಆದರ್ಶವಾದಿ, ಸುಳ್ಳು ಹೇಳಿಯಾದರೂ ಮದುವೆಯಾಗಬೇಕೆನನ್ನುವ ನಾಗರಾಜ. ಉಪಕಾರ ಮರೆಯದ ನವಾಬ್‌ಸಿಂಗ್, ಜಾತೀಯತೆ ಹಾಗೂ ಮಕ್ಕಳನ್ನು ಅಮಾನುಷವಾಗಿ ಹಿಂಸಿಸುವ ಗುಂಡಪ್ಪ ಮೇಷ್ಟರು. ಸ್ವಾರ್ಥ ಸಾಧನೆಗಾಗಿ ವೈದ್ಯವೃತ್ತಿಗೆ ಅಭಿಶಾಪದಂತಿರುವ ಸುರೇಂದ್ರ ಬಾಬು, ನಂಬಿದವರಿಗೆ ವಂಚನೆ ಮಾಡುವ ಮುತ್ತಣ್ಣ, ಸ್ಥಿತಪ್ರಜ್ಞನಾದ ಭಾವ, ಕ್ರೌರ್ಯವೇ ರೂಪ ತಾಳಿದ ಗೌಡರು, ದ್ವಿತೀಯ ವಿವಾಹದ ದುಷ್ಟ ಸಂಬಂಧದಿಂದ ಜರ್ಜರಿತವಾದ ಡೇವಿಡ್ ಮೇಷ್ಟರು, ನಿರಂತರ ಶೋಷಣೆಗೊಳಗಾದ ರೈತ, ವಿಷಯ ಲಂಪಟ ಬಹುರೂಪಿ ವಂಚಕ ರಾಯಚರಣ, ಗುಪ್ತಧನದ ದುರಾಶೆಗೆ ಒಳಗಾಗಿ ಮೌಢ್ಯಕ್ಕೆ ಶರಣಾದ ಮಂಜಣ್ಣ, ಅನುರಾಗ ವಿಷಯ ಲಾಲಸೆಗೆ ಒಳಗಾದ ವ್ಯವಹಾರ ಜ್ಞಾನವಿಲ್ಲದ ಮನೆ ಮೇಷ್ಟರು ಹೀಗೆ ಜೀವನದ ವಿವಿಧ ಮುಖಗಳನ್ನು ಪ್ರತಿನಿಧಿಸುವ ಈ ಜೀವಂತ ಪಾತ್ರಗಳು ಎಂದೆಂದಿಗೂ ಓದುಗರ ನೆನಪಿನಲ್ಲಿ ನಿಲ್ಲುತ್ತವೆ. ಸ್ತ್ರೀ ಪಾತ್ರಗಳ ಪೈಕಿ ಪತಿ ತೋರಿದ ಮಾರ್ಗದಿಂದಲೇ ಅವನನ್ನು ಪ್ರೀತಿಯಿಂದ ಗೆಲ್ಲುವ ಇಂದಿರೆ, ನನ್ನ ದೇವರು ಕಥೆಯ ವಿಧವೆ ಓದುಗರ ಗೌರವಕ್ಕೆ ಹಾಗೂ ಅನುಕಂಪಕ್ಕೆ ಪಾತ್ರರಾಗುತ್ತಾರೆ. ಜೀತಗಾರಿಕೆಯ ಅಮಾನುಷ ಕ್ರೌರ್ಯಕ್ಕೆ ತುತ್ತಾದ ಸುಬ್ಬು, ಒಡೆಯನಾಗಿ ಪ್ರಾಣ ತೆರಲು ಸಿದ್ಧನಾಗಿರುವ ಲಿಂಗ, ಮೂಕ ಪ್ರಾಣಿಗಳ ಸಂಕಟಕ್ಕೆ ಪ್ರತಿಸ್ಪಂದಿಸುವ ಹಳೆ ಪೈಕದ ರಂಗ ಈ ಮೂವರು ಸಾಮಾನ್ಯತೆಯ ಪ್ರತಿನಿಧಿಗಳಂತಿದ್ದು, ಸಹೃದಯರ ಕನಿಕರಕ್ಕೆ ಪಾತ್ರರಾದ ವ್ಯಕ್ತಿಗಳು. ವಿಶ್ವಾಮಿತ್ರ, ಪರುಶುರಾಮ, ಧನ್ವಂತರಿಯರು ಪ್ರಧಾನಪಾತ್ರ ವಹಿಸಿದರೂ ರೈತನೆ ಕೇಂದ್ರ ಬಿಂದುವಾಗಿ ಕತೆಯನ್ನೆಲ್ಲ ವ್ಯಾಪಿಸಿಕೊಂಡು ಪರಿಣಾಮಕಾರಿಯಾದ ಪ್ರಭಾವ ಬೀರಿರುವ ಮಹಾಮೌನ ಪಾತ್ರವಾಗಿದ್ದಾನೆ. ಮೂಕ ಪ್ರಾಣಿಗಳ ವೇದನೆಗೆ ಎದೆಮಿಡಿಯುವ ಮಗು ವಾಸುವಿನ ಪಾತ್ರ ಮರೆಯಲಾಗದ ಪಾತ್ರವಾಗಿದೆ. ಹೀಗೆ ಕುವೆಂಪು ಅವರ ಕಥೆಗಳಲ್ಲಿ ಬರುವ ಪಾತ್ರಗಳು ವೈವಿಧ್ಯತೆಯಿಂದ ಕೂಡಿದ್ದು ಓದುಗರ ಮನದಲ್ಲಿ ಅಚ್ಚಳಿಯದೆ ಉಳಿಯುತ್ತವೆ.

## ಅಡಿಟಿಪ್ಪಣಿಗಳು

೧. ಮಿರ್ಜಿ ಅಣ್ಣಾರಾಯ, *ಗಂಗೋತ್ರಿ*, 'ಪಾತ್ರ ಸೃಷ್ಟಿಯಲ್ಲಿ ಪುಟ್ಟಪ್ಪನವರ ಪೂರ್ಣದೃಷ್ಟಿ', ಗೀತಾಬುಕ್ ಹೌಸ್, ಮೈಸೂರು, ೧೯೬೮, ಪು. ೯೪೫

೨. ಕುವೆಂಪು, *ಸಂನ್ಯಾಸಿ ಮತ್ತು ಇತರ ಕಥೆಗಳು*, ಉದಯರವಿ ಪ್ರಕಾಶನ, ಮೈಸೂರು ೧೯೯೧, ಪು. ೮

೩. ಎಚ್. ಜೆ. ಲಕ್ಕಪ್ಪಗೌಡರು, *ಗಂಗೋತ್ರಿ*, 'ಕವಿಯ ಕುಂಚದ ಕಥಾಚಿತ್ರಗಳು', ಗೀತಾಬುಕ್ ಹೌಸ್, ಮೈಸೂರು, ೧೯೬೮, ಪು. ೭೮೫

೪. ಕುವೆಂಪು, *ಸಂನ್ಯಾಸಿ ಮತ್ತು ಇತರ ಕಥೆಗಳು*, ಉದಯರವಿ ಪ್ರಕಾಶನ, ಮೈಸೂರು, ೧೯೯೧, ಪು. ೩೯

೫. ಮಿರ್ಜಿ ಅಣ್ಣಾರಾಯ, *ಗಂಗೋತ್ರಿ*, ಗೀತಾಬುಕ್ ಹೌಸ್, ಮೈಸೂರು, ೧೯೬೮, ಪು. ೯೪೫

೬. ಕುವೆಂಪು, *ಸಂನ್ಯಾಸಿ ಮತ್ತು ಇತರ ಕಥೆಗಳು*, ಉದಯರವಿ ಪ್ರಕಾಶನ, ಮೈಸೂರು, ೧೯೯೧, ಪು. ೫೪

೭. ಅದೇ, ಪು. ೫೫

೮. ಅದೇ, ಪು. ೯೪

೯. ಕುವೆಂಪು, *ನನ್ನ ದೇವರು ಮತ್ತು ಇತರ ಕಥೆಗಳು*, ಉದಯರವಿ ಪ್ರಕಾಶನ, ಮೈಸೂರು, ೧೯೯೦, ಪು. ೮

೧೦. ಕುವೆಂಪು, *ನನ್ನ ದೇವರು ಮತ್ತು ಇತರ ಕಥೆಗಳು*, ಉದಯರವಿ ಪ್ರಕಾಶನ, ಮೈಸೂರು, ೧೯೯೦, ಪು. ೧೭

೧೧. ಅದೇ, ಪು. ೧೬

೧೨. ಅದೇ, ಪು. ೬೫

೧೩. ಅದೇ, ಪು. ೭೬

೧೪. ಡಾ. ತಿಪ್ಪೇಸ್ವಾಮಿ, 'ಪುಸ್ತಕ ಪ್ರಪಂಚ', 'ಕುವೆಂಪು ಕಥೆಗಳು ಒಂದು ವಿವೇಚನೆ', ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು, ೧೯೮೯, ಮೇ, ಪು. ೯೩

ಆಂಗ್ಲಭಾಷೆಯ 'Short Story' ಎಂಬುದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಸಣ್ಣಕಥೆ' ಎಂದು ಕರೆಯಲಾಗಿದೆ. ಆಧುನಿಕ ಕನ್ನಡ ಸಾಹಿತ್ಯದ ಮುಖ್ಯ ಪ್ರಕಾರಗಳಲ್ಲಿ ಸಣ್ಣ ಕಥೆಯೂ ಒಂದು. ಇದು ಭಾರತೀಯ ಪರಂಪರೆಯಲ್ಲಿ ತನ್ನದೇ ಆದ ನೆಲೆಯನ್ನು ಹೊಂದಿದೆ. ಕನ್ನಡದ ಉಪಲಬ್ಧ ಕೃತಿಗಳಲ್ಲಿ ಮೊದಲನೆಯದಾದ ಕವಿರಾಜಮಾರ್ಗದಲ್ಲಿ ಕೆಲವರು ಗದ್ಯಕಥೆಗಾರರನ್ನು ಹೆಸರಿಸಿದ್ದಾನೆ. ಆದರೆ ಸುಮಾರು ೧೦ ನೇ ಶತಮಾನದಲ್ಲಿ ಕಾಣಿಸಿಕೊಳ್ಳುವ 'ವಡ್ಡರಾಧನೆ' ಕನ್ನಡದಲ್ಲಿ ದೊರೆತಿರುವ ಪ್ರಥಮ ಪ್ರಾಚೀನ ಗದ್ಯಕಥೆಗಳ ಸಂಕಲನವೆನ್ನಬಹುದು. ಪಂಚತಂತ್ರ, ಕಥಾಸರಿತ್ಸಾಗರ, ಜಾನಪದ ಕಥೆಗಳು ಮುಂದಿನ ಕಥಾಸಾಹಿತ್ಯ ಬೆಳವಣಿಗೆಗೆ ಪುಷ್ಟಿಯನ್ನು ನೀಡಿವೆ. ೧೬ ನೇ ಶತಮಾನದಲ್ಲಿ ಕಂಡುಬರುವ 'ಜೈಮಿನಿ ಭಾರತ' ವು ಹಲವಾರು ಕಥೆಗಳನ್ನು ವಾರ್ಧಕ ಷಟ್ಪದಿಯಲ್ಲಿ ನಿರೂಪಿಸಿದ ಸಂಕಲನವಾಗಿದೆ. ೧೯ ನೇ ಶತಮಾನದ ಕೊನೆಯ ವೇಳೆಗೆ ಹಾಗೂ ೨೦ ನೇ ಶತಮಾನದ ಪ್ರಾರಂಭದ ಹೊತ್ತಿಗೆ ಕನ್ನಡ ಕಥಾಸಾಹಿತ್ಯ ಪಾಶ್ಚಾತ ಸಾಹಿತ್ಯ ಪ್ರಭಾವವನ್ನು ತನ್ನೊಳಗೆ ಅಡಗಿಸಿಕೊಳ್ಳಲಾರಂಭಿಸಿತು. ಆ ದಿಸೆಯಿಂದ ಆಧುನಿಕ ಸಣ್ಣಕಥೆ, ವಸ್ತು, ರೂಪ, ತಂತ್ರ, ಭಾಷೆ, ಶೈಲಿ ಹಾಗೂ ಸಂವೇದನೆಯಲ್ಲಿ ಹಿಂದಿಗಿಂತ ಹೊಸ ಬರವಣಿಗೆಯನ್ನು ಪಡೆದುಕೊಂಡು ಬೆಳೆಯಲಾರಂಭಿಸಿತು. ಸಣ್ಣಕತೆ ಹೊರಜಗತ್ತಿನ ಒಳ ಅಭಿವ್ಯಕ್ತಿಗಾಗಿ ೨೦ ನೇ ಶತಮಾನದಲ್ಲಿ ರೂಪುಗೊಂಡಿದೆ. ಪ್ರಕೃತ ಸಂದರ್ಭದಲ್ಲಿ ದೃಶ್ಯ ಮಾಧ್ಯಮಗಳು ಅಗಾಧವಾಗಿ ಬೆಳೆಯುತ್ತಿದ್ದರೂ ಸಣ್ಣಕಥೆ ತನ್ನ ಪ್ರಾಮುಖ್ಯತೆಯನ್ನು ಬಿಟ್ಟುಕೊಟ್ಟಿಲ್ಲ. ದಿನಪತ್ರಿಕೆ, ವಾರಪತ್ರಿಕೆ, ಮಾಸ ಪತ್ರಿಕೆಗಳಲ್ಲಿ ಸಣ್ಣಕಥೆಗಳು ಅಗಾಧ ಸಂಖ್ಯೆಯಲ್ಲಿ ಜನ್ಮತಳೆಯುತ್ತಿವೆ. ಆದ ಕಾರಣ ಆಧುನಿಕ ಕನ್ನಡದ ಸಣ್ಣ ಕಥಾ ಸಾಹಿತ್ಯದಲ್ಲಿ ಆಶಯ, ಧೋರಣೆ, ವಸ್ತು, ತಂತ್ರಗಳ ಗ್ರಹಿಕೆಯ ಹಿನ್ನಲೆಯಲ್ಲಿ ಕೆಲವು ಘಟ್ಟಗಳನ್ನು ಗುರುತಿಸಬಹುದು. ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ಮತ್ತು ದಲಿತ ಎಂಬುದಾಗಿ ಅವುಗಳನ್ನು ವಿಂಗಡಿಸಬಹುದು.

೧೯೦೦ ರ ಸುಮಾರಿಗೆ ಪ್ರಕಟಗೊಂಡ ಪಂಜೇಮಗೇಶರಾಯರ 'ನನ್ನ ಚಿಕ್ಕತಾಯಿ', 'ಕಮಲಾಪುರದ ಹೋಟ್ಲಿನಲ್ಲಿ', 'ಭಾರತ ಶ್ರವಣ', ಕಥೆಗಳು ಸಣ್ಣ ಕಥಾ ಸಾಹಿತ್ಯಕ್ಕೆ ಒಂದು ನೆಲೆಯನ್ನು ಒದಗಿಸಿಕೊಟ್ಟವು. ಸಣ್ಣ ಕಥೆಯ ಸ್ವರೂಪದ ದೃಷ್ಟಿಯಿಂದ ಅಂತಹ ಮಹತ್ವವಾಗಿ ಕಂಡುಬರದಿದ್ದರೂ ಬರವಣಿಗೆಯಲ್ಲಿ ವಿಶೇಷ ಗುಣಗಳು ಮೂಡಿಬಂದಿವೆ. ಉತ್ತರ ಕರ್ನಾಟಕದ ದೇಶೀ ಶೈಲಿಯನ್ನು ಆರಂಭಿಸಿದ ಕಥೆಗಾರರಲ್ಲಿ ಒಬ್ಬರಾದ ಕೆರೂರು ವಾಸುದೇವಚಾರ್ಯರು ತಮ್ಮ ಕಥೆಗಳಲ್ಲಿ ಬಳಸಿಕೊಂಡದ್ದು ಕನ್ನಡ ಕಥಾ ಸಾಹಿತ್ಯಕ್ಕೆ ತಕ್ಕಮಟ್ಟಿಗೆ ಪುಷ್ಟಿಯನ್ನು ನೀಡಿದಂತಾಯಿತು. 'ಸುಚಿತ್ರ ಭಾರತ' ಹಾಗೂ 'ಶುಭೋದಯ' ಪತ್ರಿಕೆಯ ಸಂಪಾದಕರಾಗಿ ತಮ್ಮ ಲೇಖನಿಯನ್ನು ಪಳಗಿಸಿಕೊಂಡಿದ್ದರು. ಪಂಜೆಯವರಿಗಿಂತ ಭಿನ್ನವಾದ ಕಥೆಯ ನೆಲೆಯನ್ನು ಕಟ್ಟಿಕೊಟ್ಟರು. 'ಪ್ರಕೃತಿ ಬಲಿ', 'ಮಲ್ಲೇಶಿಯ ನಲ್ಲೆಯರು', 'ಕರಿಗಾಲಿನ ಗಿರಿರಾಯರು', 'ತೊಳೆದ ಮುತ್ತು' ಕಥೆಗಳಲ್ಲಿ ಕಥಾವಸ್ತು ಗಟ್ಟಿಯಾಗಿರುವುದನ್ನು ಕಾಣಬಹುದು. 'ಮಲ್ಲೇಶಿಯ ನಲ್ಲೆಯರು' ಕಥೆಯಲ್ಲಿ ಕೆರೂರರ ಹಾಸ್ಯ ಪ್ರಜ್ಞೆ ಪ್ರಬುದ್ಧಗೊಂಡಿರುವುದನ್ನು ಗುರುತಿಸಬಹುದು. ಹೊಸಗನ್ನಡದ ಅರುಣೋದಯ ಕಾಲದಲ್ಲಿ ಸಮರ್ಥ ಕಥೆಗಾರರಾಗಿ ಎಂ. ಎನ್. ಕಾಮತ್, ಎಸ್. ಜಿ. ಶಾಸ್ತ್ರಿ, ಎ. ಆರ್. ಕೃಷ್ಣಶಾಸ್ತ್ರಿ, ಮುಂತಾದವರು ಕಂಡುಬರುತ್ತಾರೆ.

ಸಣ್ಣಕಥೆಯು ವಿಶಿಷ್ಟ ಪ್ರಕಾರವಾಗಿ ರೂಪುಗೊಳ್ಳುವ ನಿಟ್ಟಿನಲ್ಲಿ ಕೃಷಿ ಮಾಡಿದವರೆಂದರೆ ಮಾಸ್ತಿಯವರು. ಇವರು ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಕೃಷಿ ಮಾಡಿದ್ದರೂ ಸಣ್ಣ ಕತೆಗಳಿಂದ ಪ್ರಸಿದ್ಧರಾದರು. ಸ್ಪಷ್ಟವಾದ ಚೌಕಟ್ಟು ಇಲ್ಲದಿದ್ದ ಕಥಾಸಾಹಿತ್ಯಕ್ಕೆ ಮೂರ್ತ ರೂಪುಕೊಟ್ಟರು. ಸುಮಾರು ೧೯೧೦-೧೧ ರ ಸುಮಾರಿನಲ್ಲಿ 'ರಂಗನ ಮದುವೆ' ಕಥೆ ಮಾಸ್ತಿಯವರಿಂದ ಮೊದಲು ರಚಿತಗೊಂಡಿತು. ೧೯೨೦ ರಲ್ಲಿ 'ಕೆಲವು ಸಣ್ಣ ಕಥೆಗಳು' ಎಂಬ ಸಂಕಲನ ಪ್ರಕಟಗೊಂಡಿತು. ೯೦ ಕಥೆಗಳನ್ನು ಮಾಸ್ತಿಯವರು ರಚಿಸಿದ್ದಾರೆ. ಸಮಗ್ರ ಜೀವನ ದೃಷ್ಟಿಯ ಕೊರತೆಯಿದ್ದ ಕಥಾ ಸಾಹಿತ್ಯಕ್ಕೆ ಆಳವಾದ ತಿಳಿವು ಹಾಗೂ ಜೀವನ ದೃಷ್ಟಿಯನ್ನು ತುಂಬಿಕೊಟ್ಟರು. ಸಾಮಾಜಿಕ, ಐತಿಹಾಸಿಕ, ಪೌರಾಣಿಕ ಎಲ್ಲಾ ಬಗೆಯ ಕಥೆಗಳನ್ನು ರಚಿಸಿದ್ದಾರೆ. ಇವರ ಕಥೆಗಳು ವಸ್ತು ಮತ್ತು ತಂತ್ರದ ದೃಷ್ಟಿಯಿಂದ ಹಿರಿದಾದ ಮೌಲ್ಯವನ್ನು ಒಳಗೊಂಡಿದೆ. ಪಾತ್ರಗಳ ಸೃಷ್ಟಿಯಂತೂ ಅಚ್ಚಳಿಯದೆ ಸಹೃದಯರ ಮನಸ್ಸಿನಲ್ಲಿ ನಿಲ್ಲತಕ್ಕವುಗಳಾಗಿವೆ. ಸನ್ನಿವೇಶ ಸಂದರ್ಭಕ್ಕನುಗುಣವಾಗಿ ತಿಳಿಹಾಸ್ಯವು ಮೈದಳೆಯುತ್ತದೆ. ಇಂಗ್ಲಿಷ್ ಕಥೆಗಳ ಮಾದರಿಯಲ್ಲಿ ಮಾಸ್ತಿಯವರ ಕಥೆಗಳು ಕಂಡುಬಂದರೂ ಭಾರತೀಯ ಪರಂಪರೆಯನ್ನು ಬಿಟ್ಟುಕೊಟ್ಟಿಲ್ಲ. ಕನ್ನಡ ಸಂಸ್ಕೃತಿಯ ಹಿರಿಮೆಯನ್ನು, ರಾಷ್ಟ್ರೀಯ ಸಂಸ್ಕೃತಿಯ ಕೇಂದ್ರೀಕರಣವನ್ನು ಕಟ್ಟಿಕೊಟ್ಟಿರುತ್ತಾರೆ. ಹಿಂದೂ ಸಂಸ್ಕೃತಿ ಮತ್ತು ಧರ್ಮದ ಬಗ್ಗೆ ಒಲವಿರುವ ಮಾಸ್ತಿ ಸಂಸ್ಕೃತಿಯಲ್ಲಿರುವ ಕುಂದುಕೊರತೆಗಳನ್ನು ಸಹಾನುಭೂತಿಯೊಂದಷ್ಟೆ ಅಲ್ಲದೆ ಮಾನವೀಯ ಅನುಕಂಪದಿಂದಲೂ ನೋಡುತ್ತಾರೆ. 'ಮೊಸರಿನ ಮಂಗಮ್ಮ' ಕಥೆಯಲ್ಲಿ ಬರುವ ಸೊಸೆ ಹಿಂದೂ ಸಂಸ್ಕೃತಿಯ ಹಿರಿತನವನ್ನು ಬಿಂಬಿಸುತ್ತಾಳೆ. ಪೂರ್ವ ಮತ್ತು ಪಶ್ಚಿಮ ಸಂಸ್ಕೃತಿಗಳ ಮುಖಾಮುಖಿ, ಪ್ರಾದೇಶಿಕತೆ, ನ್ಯಾಯ, ಗಂಡುಹೆಣ್ಣಿನ ಆಕರ್ಷಣೆ ಮುಂತಾದ ಪ್ರಧಾನ ಅಂಶಗಳು ಕಂಡುಬರುತ್ತವೆ. ಈ ನಿಟ್ಟಿನಲ್ಲಿ 'ರಂಗನ ಮದುವೆ', 'ಬಿಳಿಗಿರಿರಂಗ', 'ಗೌತಮಿ ಹೇಳಿದ ಕಥೆ', 'ಆಚಾರ್ಯರ ಪತ್ನಿ', 'ಕೃಷ್ಣಮೂರ್ತಿ ಹೆಂಡತಿ, ವೆಂಕಟಿಗನ ಹೆಂಡತಿ, ವೆಂಕಟಸ್ವಾಮಿಯ ಪ್ರಣಯ, ಜ್ಯೋಗ್ಯೋರ ಅಂಜಪ್ಪನ ಕೋಳಿಕಥೆ, ಹೇಮಕೂಟದಿಂದ ಬಂದ ಮೇಲೆ ಇಲ್ಲಿಯ ತೀರ್ಪು, ವಸುಮತಿ ಇತ್ಯಾದಿ ಕಥೆಗಳು ಮಹತ್ವದ ಕಥೆಗಳ ಸಾಲಿಗೆ ಸೇರುತ್ತವೆ. 'ವೆಂಕಟಿಗನ ಹೆಂಡತಿ' ಕಥೆಯಲ್ಲಿ ವೆಂಕಟಿಗನ ಔದಾರ್ಯವನ್ನು ಕಾಣಬಹುದು. ತನ್ನ ಕೈ ಹಿಡಿದ ಹೆಂಡತಿ ತನಗೆ ಅನ್ಯಾಯವನ್ನು ಎಸಗಿದರೂ ವಿಚಲಿತನಾಗುವುದಿಲ್ಲ. ಮುಂದೊಂದು ದಿನ ಆತನ ಹೆಂಡತಿ ತನ್ನ ತಪ್ಪಿನ ಅರಿವಾಗಿ ವೆಂಕಟಿಗನನ್ನು ಹುಡುಕಿಕೊಂಡು ಬರುತ್ತಾಳೆ. ಆ ಸಂದರ್ಭದಲ್ಲಿ ವೆಂಕಟಿಗ ಯಾವುದೇ ದ್ವಂದ್ವತೆಗೆ ಒಳಗಾಗದೆ ಮುಕ್ತವಾಗಿ ಅವಳನ್ನು ಸ್ವೀಕರಿಸುತ್ತಾನೆ. ಇಲ್ಲಿ ಮಾಸ್ತಿಯವರು ಬದುಕಿನ ಸಾಧ್ಯತೆಗಳ ಆಳಕ್ಕಿಳಿದು ಕಥೆಯ ರೂಪವನ್ನು ಕೊಟ್ಟಿದ್ದಾರೆ. ಜ್ಯೋಗ್ಯೋರ ಅಂಜಪ್ಪನ ಕೋಳಿ ಕತೆಯಲ್ಲಿ ಸತ್ಯ ಮತ್ತು ತಿಳುವಳಿಕೆಗಳ ನಡುವಿನ ಸಂಕೀರ್ಣತೆಯನ್ನು ಬಿಚ್ಚಿರುವ ನಿಟ್ಟಿನಲ್ಲಿ ಸಫಲವಾದ ಕಥೆಯಾಗಿದೆ. ಅಂಜಪ್ಪನು ಆಕೆಯ ಚಲುವಿಗೆ ಒಳಗಾಗದೆ ತನ್ನ ತನವನ್ನು ಉಳಿಸಿಕೊಳ್ಳುತ್ತಾನೆ. ಎಲ್ಲ ವ್ಯಕ್ತಿಗಳ ಪ್ರಶ್ನೆಗಳನ್ನು ಮೀರಿನಿಂತ ವ್ಯಕ್ತಿತ್ವ ಅಂಜಪ್ಪನದಾಗಿದೆ. ಸಾಮಾನ್ಯವಾಗಿ ಮನುಷ್ಯನ ಘನತೆಯ ಬಗ್ಗೆ ಮಾಸ್ತಿಯವರಿಗೆ ಒಲವಿದ್ದಂತೆ ಕಾಣುತ್ತದೆ. ಆ ಪ್ರೀತಿ ಇವರ ಕಥೆಗಳಲ್ಲಿ ಅಭಿವ್ಯಕ್ತಿಯನ್ನು ಪಡೆದುಕೊಂಡಿದೆ.

ಮಾಸ್ತಿಯವರ ಐತಿಹಾಸಿಕ ಹಾಗೂ ಪೌರಾಣಿಕ ಕಥೆಗಳಲ್ಲಿ ಗತಕಾಲದ ಸಂಸ್ಕೃತಿ ಪ್ರವಾಹ ವರ್ತಮಾನಕ್ಕೆ ಹರಿದಿರುವುದನ್ನು ಗುರುತಿಸಬಹುದು. ಸಂಸ್ಕಾರದ ಚೌಕಟ್ಟಿನ ಹಿನ್ನಲೆಯಲ್ಲಿ ಈ ಕಥೆಗಳು ಮೈದಳೆದಿವೆ.

'ಬಾದಷಹನ ದಂಡನೆ', 'ಪಂಡಿತನ ಮರಣಶಾಸನ', ಕಥೆಗಳಲ್ಲಿ ರಾಜಕೀಯ ಜೀವನದ ಸೂಕ್ಷ್ಮತೆಗಳನ್ನು ಕಂಡಿಸಿದ್ದಾರೆ.

ರಚನಾ ವಿನ್ಯಾಸದ ದೃಷ್ಟಿಯಿಂದ ಮಾಸ್ತಿಯವರ ಎಲ್ಲಾ ಕಥೆಗಳು ಒಂದು ಪೂರ್ಣ ಹಂತವನ್ನು ಮುಟ್ಟಿವೆ ಎನ್ನಬಹುದು. ಹೊಸಗನ್ನಡ ಗದ್ಯ ಬರವಣಿಗೆಯ ಶ್ರೇಯಸ್ಸಿಗೆ ಮಾಸ್ತಿಯವರ ಕೊಡುಗೆ ಅಪಾರವಾದುದು. 'ಸಾರಿಪುತ್ರನ ಕೊನೆಯ ದಿನಗಳು' ಕತೆಯಲ್ಲಿ ಹೆಜ್ಜೆ-ಹೆಜ್ಜೆಗೂ ಹೊಸ ಹೊಸ ಆಯಾಮಗಳು ಸೃಷ್ಟಿಗೊಳ್ಳುವಂತೆ ರಚಿಸಿದ್ದಾರೆ. 'ಒಂದು ಹಳೆಯ ಕಥೆ' ಕನ್ನಡ ಕಥಾ ಸಾಹಿತ್ಯದಲ್ಲಿ ಒಂದು ವಿಶಿಷ್ಟತೆಯನ್ನು ಹೊಂದಿರುವಂತಹದು. ಒಟ್ಟಾರೆಯಾಗಿ ನವೋದಯ ಕಾಲದ ಸಣ್ಣಕಥೆ, ಪಂಜೆಯವರಿಂದ ಪ್ರಾರಂಭಗೊಂಡರೂ ಮಾಸ್ತಿಯವರ ಪ್ರತಿಭಾ ಸಂಪನ್ನತೆಯಿಂದ ಕಥಾ ಸಾಹಿತ್ಯವು ತನ್ನದೇ ಆದ ವಿಶಿಷ್ಟ ಭೂಮಿಕೆಯನ್ನು ಪಡೆದುಕೊಂಡಿತು.

ಕನ್ನಡ ಸಾಹಿತ್ಯದ ಕಂಪನ್ನು ಭಾರತೀಯ ಸಾಹಿತ್ಯಕ್ಕಷ್ಟೆ ಅಲ್ಲದೆ ವಿಶ್ವ ಸಾಹಿತ್ಯದ ಮಟ್ಟಕ್ಕೆ ಹೊರಸೂಸಿದ ಮಹಾಚೇತನ ಕುವೆಂಪು. ಇವರು ಸಾಮಾನ್ಯವಾಗಿ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ತಮ್ಮ ಬರವಣಿಗೆಯ ಛಾಪನ್ನು ಮೂಡಿಸಿದ್ದಾರೆ. ದಾರ್ಶನಿಕರಾಗಿ, ಕವಿಗಳಾಗಿ, ಕಾದಂಬರಿಕಾರರಾಗಿ, ನಾಟಕಕಾರರಾಗಿ, ಹೊರಹೊಮ್ಮಿದಂತೆ ಕಥೆಗಾರರಾಗಿಯೂ ಕಂಡುಬರುತ್ತಾರೆ. ೧೯೩೭ ರಲ್ಲಿ ಪ್ರಕಟವಾದ 'ಸಂನ್ಯಾಸಿ ಮತ್ತು ಇತರ ಕಥೆಗಳು ಹಾಗೂ ೧೯೪೦ರಲ್ಲಿ ಪ್ರಕಟಗೊಂಡ 'ನನ್ನ ದೇವರು ಮತ್ತು ಇತರ ಕಥೆಗಳು' ಎಂಬ ಎರಡು ಸಂಕಲನಗಳಲ್ಲಿ ೧೭ ಕಥೆಗಳನ್ನು ರಚಿಸಿದ್ದಾರೆ. ಇವುಗಳಿಂದಲೆ ಅವರು ಕನ್ನಡ ಪ್ರಬುದ್ಧ ಕಥನಕಾರರಾಗಿ ಕಾಣಿಸಿಕೊಳ್ಳುತ್ತಾರೆ. ನಿಸರ್ಗದ ಆರಾಧಕರಾದ ಕುವೆಂಪು ತಮ್ಮ ಕಥೆಗಳ ಮೂಲಕ ಸಮಾಜದ ಅಂಕುಡೊಂಕುಗಳನ್ನು ತಿದ್ದುವ ಪ್ರಯತ್ನ ಮಾಡಿದ್ದು ಕಂಡುಬರುತ್ತದೆ. ಮಾನವೀಯ ಅಂತಃಕರಣ ತನ್ನೆಲ್ಲ ತುಡಿತದೊಂದಿಗೆ ಕಥೆಗಳ ಚಿತ್ರಣ ಕಂಡುಬರುತ್ತದೆ. ಸಮಾಜದ ಸಾಮಾಜಿಕ, ಆರ್ಥಿಕ, ಧಾರ್ಮಿಕ ಬದುಕಿನ ದಾಖಲೆಗಳು ಕಂಡುಬರುತ್ತವೆ. ಹಳೆಯ ಮುಗ್ಧರನ್ನು ಮಂತ್ರ, ಜ್ಯೋತಿಷಗಳು ಹೇಗೆ ವಂಚಿಸುತ್ತವೆ ಎಂಬುದರ ಎಚ್ಚರಿಕೆಯನ್ನು ಕಥೆಗಾರರು ನೀಡಿದ್ದಾರೆ. ಬದುಕಿನಲ್ಲಿ ಸಂಸ್ಕೃತಿ, ಸಂಸ್ಕಾರ, ಆದರ್ಶ, ನೈತಿಕತೆಗಳು ಬಹಳ ಮುಖ್ಯವಾದವುಗಳು ಎಂದು ನಂಬಿದ್ದವರು ಕುವೆಂಪು. ಈ ಹಿನ್ನಲೆಯಲ್ಲಿ ಕಥೆಗಳು ಮೂಡಿಬಂದಿರುವುದು ಬಹು ಮುಖ್ಯ ಸಂಗತಿಯೆನಿಸುತ್ತದೆ. ನಿಸರ್ಗದ ಚೆಲುವನ್ನು ಸವಿದರಷ್ಟೇ ಸಾಲದು ಬದುಕಿನ ಚೆಲುವನ್ನು ಸವಿಯುವ ಸುಸಂಸ್ಕೃತ ವ್ಯಕ್ತಿತ್ವ ಕುವೆಂಪುರವರದು. ನವೋದಯ ಕಾಲದ ಸಾಹಿತ್ಯವು ತನ್ನದೇ ಆದ ಕೆಲವು ರೂಪುರೇಷೆಗಳ ಹಿನ್ನಲೆಯಲ್ಲಿ ಮೂಡಿಬಂದಿದೆ. ಕುವೆಂಪುರವರು ನವೋದಯದ ಕಾಲದ ಒಬ್ಬ ಪರಿಪೂರ್ಣ ಬರಹಗಾರರಾಗಿ ಕಂಡುಬರುತ್ತಾರೆ.

ಕುವೆಂಪುರವರ ಮೊದಲ ಕಥಾಸಂಕಲನವಾದ 'ಸಂನ್ಯಾಸಿ ಮತ್ತು ಇತರ ಕಥೆಗಳು' ಇದರಲ್ಲಿ ವೈಶಿಷ್ಟ್ಯಗಳನ್ನು ಹೀಗೆ ಗುರುತಿಸಬಹುದು. 'ಸಂನ್ಯಾಸಿ'- ಕಥೆಯು ಆದರ್ಶದ ತಳಹದಿಯ ಮೇಲೆ ರೂಪುಗೊಂಡಿದೆ. ಬದುಕಿನ ಚೆಲುವನ್ನು ಸ್ವೀಕರಿಸುವುದರೊಂದಿಗೆ ಸಂನ್ಯಾಸಕ್ಕೂ ಒಂದು ಹಿರಿಮೆಯನ್ನು ಕಟ್ಟಿಕೊಡುವ ಕಥೆ ಇದಾಗಿದೆ. ಬದುಕಿನಲ್ಲಿ ಅಕಾಲ ವೈರಾಗ್ಯ ಸಹಜವಲ್ಲ ಸಮಸ್ತ ಸೃಷ್ಟಿಯಲ್ಲಿ ಅನುರಾಗ ಇದ್ದೇ ಇರುತ್ತದೆ ಎಂಬುದನ್ನು ಕಥೆಗಾರರು ಈ ಕಥೆಯಲ್ಲಿ ಬಹಳ ಸೂಕ್ಷ್ಮವಾಗಿ

ಒಡಮೂಡಿಸಿದ್ದಾರೆ. ಕುವೆಂಪುರವರ ಎತ್ತರ ಚಿಂತನಾಶೀಲತೆ ಹಾಗೂ ಸಂಯಮದ ಅಪೂರ್ವ ಸೃಷ್ಟಿಯೇ ಸಂನ್ಯಾಸಿ ಕಥೆ. 'ಕ್ರಿಸ್ತನಲ್ಲ ಪಾದ್ರಿಯ ಮಗಳು' ಕಥೆಯಲ್ಲಿ ಕಥೆಗಾರರು ಆತ್ಮೀಯ ಮಿತ್ರನೊಬ್ಬನ ಬದುಕಿನಲ್ಲಿ ಘಟಿಸಿದ ಅಂಶಗಳನ್ನು ವ್ಯಕ್ತಪಡಿಸಿದ್ದಾರೆ. ಹಿಂದೂ ಮತ್ತು ಕ್ರೈಸ್ತ ಧರ್ಮಕ್ಕೆ ಸೇರಿದ ಗಂಡು ಹೆಣ್ಣಿನ ನಡುವೆ ಅನುರಾಗ ಉಂಟಾದರೂ ಅದು ಮುಂದೆ ಸಾಕಾರಗೊಳ್ಳದೇ ಮುರಿದುಹೋಗುವುದನ್ನು ಕಾಣಹುದು. ಹೆಣ್ಣಿನ ಸೌಂದರ್ಯದ ಮುಂದೆ ವೇದಾಂತ, ತತ್ವ, ಆದರ್ಶ, ಶಾಸ್ತ್ರಗಳು ತಮ್ಮ ಕಾಂತಿಯನ್ನು ಕಳೆದುಕೊಳ್ಳುತ್ತವೆ ಎಂಬ ಅಂಶವೂ ಈ ಕಥೆಯಲ್ಲಿ ಮನದಟ್ಟಾಗುತ್ತದೆ. ಹಿಂದೂ ವ್ಯಕ್ತಿಯು ಧರ್ಮಭ್ರಷ್ಟನಾದರೂ ಪಾದ್ರಿಯ ಮಗಳನ್ನು ಪಡೆಯುವಲ್ಲಿ ವಿಫಲನಾಗುತ್ತಾನೆ. ಇದರಿಂದಾಗಿಯೇ ಪ್ರೇಮ ಕುರುಡು ಎಂದು ತಿಳಿಯಲಾಗುವುದಿಲ್ಲ. ಬದಲಿಗೆ ಆ ವ್ಯಕ್ತಿಯ ಮನೋದೌರ್ಬಲ್ಯ ಎಂದು ತಿಳಿಸುವ ದುರಂತ ಕಥೆ ಇದಾಗಿದೆ. 'ಈಶ್ವರನೂ ನಕ್ಕಿರಬೇಕು'— ಈ ಕಥೆಯ ನಾಯಕ ನಾಯಕಿಯರು ಚಿತ್ರ ಪಟವನ್ನು ನೋಡುವುದರ ಮೂಲಕ ತಮ್ಮ ತಮ್ಮ ಅನುರಾಗವನ್ನು ವ್ಯಕ್ತಪಡಿಸುತ್ತಾರೆ. ವಿವಾಹ ಕಾರ್ಯವು ಜರುಗುತ್ತದೆ. ದಿನಗಳೆದಂತೆ ಅವರುಗಳಿಗೆ ಅರಿವಿಲ್ಲದಂತೆ ಅವರವರ ದೋಷಗಳು ಹೊರಮೂಡಲಾರಂಭಿಸುತ್ತವೆ. ಆದರೆ ಕಥೆಗಾರರು ಬಹಳ ಸೂಕ್ಷ್ಮತೆಯಿಂದ ದೋಷವು ಯಾರೊಬ್ಬರ ಮೇಲು ಉಳಿಯದಂತೆ ನಾಟಕೀಯವಾಗಿ ಚಿತ್ರಿಸಿದ್ದಾರೆ. 'ಆರಾಣೆ ಮೂರು ಕಾಸು' ಕಥೆಯ ದಿವಾನನಾಗಿದ್ದವನು ಭಿಕ್ಷುಕನಾದದ್ದು ಚಿತ್ರಿತಗೊಂಡಿದೆ. ವಿಶ್ವಾಸ ಮತ್ತು ನಂಬಿಕೆಯನ್ನು ಬದುಕಿನ ಒಂದು ಚಿರಂತನ ಮೌಲ್ಯವಾಗಿ ಚಿತ್ರಿಸಲಾಗಿದೆ. ಉದಾತ್ತನಿಗೆ ಎಂತಹ ಕಷ್ಟ ಬಂದರೂ ಭಿಕ್ಷೆ ಬೇಡಿದರೂ ಸಹಾಯ ಮಾಡಿದವರನ್ನು ಸ್ಮರಿಸುವ ಕೃತಜ್ಞತೆಯಿದೆ. ಬದುಕಿನ ಮೌಲ್ಯಗಳನ್ನು ಈ ಕಥೆಯ ನಾಟಕೀಯವಾಗಿ ಶೋಧಿಸಿದೆ. ಪ್ರಕೃತಿ ಮತ್ತು ನದಿ ಇವುಗಳ ಮಧ್ಯೆ ಸಿಲುಕಿಕೊಂಡ ಮನುಷ್ಯರ ಜೀವವನ್ನು ಕಾಪಾಡುವ ನಿಟ್ಟಿನಲ್ಲಿ ಮತ್ತೊಬ್ಬ ಮನುಷ್ಯ ಜೀವಿಯ ಸಾಹಸವನ್ನು 'ಯಾರೂ ಅರಿಯದ ವೀರ' ಕಥೆಯಲ್ಲಿ ಕಲಾತ್ಮಕವಾಗಿ ಚಿತ್ರಿಸಲಾಗಿದೆ. ಆಳುಗಳು ಬದುಕಿನ ದುಸ್ಥಿತಿ, ಹತಾಶೆ, ನೋವು, ಅಸಹಾಯಕತೆಯನ್ನು ಆಳವಾಗಿ ಸಹಾನುಭೂತಿಯಿಂದ ಚಿತ್ರಿಸಲಾಗಿದೆ. ಅಂತಸ್ತುಗಳ ಗಡಿದಾಟಿ ಮೆರೆಯುವ ಮನುಷ್ಯ ಸಂಬಂಧಗಳ ಶ್ರೀಮತಿಕೆಯನ್ನು 'ಯಾರೂ ಅರಿಯದ ವೀರ' ಕತೆ ಅತ್ಯಂತ ಚೇತೋಹಾರಿಯಾಗಿ ನಿರೂಪಿಸುತ್ತದೆ. 'ಮಾಯದ ಮನೆ' ಕಥೆಯು ರೋಮಾಂಚಕ ಅನುಭವವನ್ನು ನೀಡುತ್ತದೆ. ಪಾಪ-ಪ್ರಜ್ಞೆಯ ಹೆದರಿಕೆಯಿಂದ ಭೀತನಾದ ವ್ಯಕ್ತಿಯೊಬ್ಬನ ಮಾನಸಿಕ ತೊಳಲಾಟವನ್ನು ಮೊದಲಿನಿಂದ ಕೊನೆಯವರೆಗೂ ಒಂದೇ ರೀತಿಯ ಕೌತುಕವನ್ನು ಉಳಿಸಿಕೊಂಡು ಈ ಕಥೆ ಸಾಗುತ್ತದೆ. ಹಣದ ಆಸೆಯಿಂದ ವೈದ್ಯನೊಬ್ಬ ಮಾನವೀಯತೆಯನ್ನು ಮರೆತರೆ ಸಾಮಾನ್ಯ ಜನರಿಗೆ ಅನ್ಯಾಯವಾಗುವುದನ್ನು ಚಿತ್ರಿಸಿದ್ದಾರೆ. 'ದೆವ್ವದ ಕಾಟ' ಕಥೆಯಲ್ಲಿ ಸಮಾಜದ ಮೂಢನಂಬಿಕೆ, ಅಂಧಶ್ರದ್ಧೆಗಳನ್ನು ಹೊರತೆಗೆಯುವ ಕೆಲಸವನ್ನು ಕುವೆಂಪುರವರು ಮಾಡಿದ್ದಾರೆ. ಕಥೆಯ ಆರಂಭದಿಂದ ಕೊನೆಯವರೆಗೂ ದೆವ್ವದ ರಹಸ್ಯವನ್ನು ವ್ಯಂಗ್ಯದ ಮೂಲಕ ಹೊರಗೆಡವಿದ್ದಾರೆ. ನಮ್ಮ ಸಮಾಜದ ಮೇಲೆ ವೈದಿಕವರ್ಗವು ಪ್ರಭಾವಿಸುತ್ತಾ ಬಂದಿರುವ ಕೆಲವು ಮೂಢ ಸತ್ಯಗಳನ್ನು ತಿಳಿಸುವ ನಿಟ್ಟಿನಲ್ಲಿ ಈ ಕತೆ ಕುತೂಹಲಕಾರಿಯಾದುದು. ಬದುಕಿನ ಸಂದರ್ಭದಲ್ಲಿಯ ನಂಬಿಕೆ ಮತ್ತು ವಿಶ್ವಾಸಗಳ ಸೋಗಿನಲ್ಲಿ ಮೌಢ್ಯವನ್ನು ಸಾಮಾನ್ಯರ ಬದುಕಿನಲ್ಲಿ

ತುಂಬುವ ವರ್ಗದ ಕಟು ಸತ್ಯವನ್ನು ಪದರ ಪದರಗಳ ಮೂಲಕ ಹೊರ ಹಾಕಿದ್ದಾರೆ. 'ಸಂನ್ಯಾಸಿ ಮತ್ತು ಇತರ ಕಥೆಗಳು' ಸಂಕಲನದಲ್ಲಿಯೇ ಬಹಳ ಮಹತ್ತರವಾದ ಹಾಗೂ ಕರುಣೆಯನ್ನು ಘನೀಕರಿಸಬಹುದಾದ ಕಥೆಯಾಗಿ 'ಶ್ರೀ ಮನ್ಮೂಕವಾಗಿತ್ತು' ಕಂಡುಬರುತ್ತದೆ. ಕ್ಷಣಕ್ಷಣಕ್ಕೂ ಸಹೃದಯವನ್ನು ತನ್ನೆಡೆಗೆ ತನ್ಮಯಗೊಳಿಸಿಕೊಳ್ಳುವ ಕಥೆ ಇದಾಗಿದೆ. ಕೃಷಿಕ ಮತ್ತು ದನ ಕರುಗಳ ನಡುವಿನ ಅವಿನಾಭಾವ ಸಂಬಂಧವನ್ನು, ಪ್ರೀತಿಯನ್ನು ಮನಕರಗುವಂತೆ ಕುವೆಂಪು ಚಿತ್ರಿಸಿದ್ದಾರೆ. ತಾವು ಸಾಕಿ ಬೆಳೆಸುವ ದನಕರುಗಳು ಬೇರೆಯಲ್ಲ ಮಕ್ಕಳು ಬೇರೆಯಲ್ಲ ಎಂಬ ತಾತ್ವಿಕತೆಯನ್ನು ಪ್ರಸ್ತುತ ಕಥೆಯಲ್ಲಿ ಚಿತ್ರಿಸಲಾಗಿದೆ.

ಕುವೆಂಪುರವರ ೨ನೇ ಕಥಾ ಸಂಕಲನವಾದ 'ನನ್ನ ದೇವರು ಮತ್ತು ಇತರ ಕಥೆಗಳು'-ಇದರಲ್ಲಿ ಕಥನ ಕಲೆಯು ವಿಕಸನಗೊಂಡಿರುವ ಹೆಜ್ಜೆಗಳನ್ನು ಗುರುತಿಸಬಹುದು. ಈ ಸಂಕನಲದಲ್ಲಿಯೂ ಶೋಷಣೆ, ಪರಿವರ್ತನೆ, ಅಮಾನವೀಯತೆ ಮುಂತಾದ ಸಾಮಾಜಿಕ ಶಾಪಗಳ ಕಡೆಗೇ ಕಥೆಗಾರರ ದೃಷ್ಟಿ ಪ್ರತಿಫಲಿಸಿದೆ. ಹರೆಯದ ಹೆಣ್ಣೊಬ್ಬಳು ಗಂಡನನ್ನು ಕಳೆದುಕೊಂಡು ಅನುಭವಿಸುವ ಮಾನಸಿಕ ತೊಳಲಾಟ, ವೇದನೆ, ತುಮುಲತೆಯ ದ್ವಂದ್ವಗಳನ್ನು ಹಂತಹಂತವಾಗಿ "ನನ್ನ ದೇವರು" ಕಥೆಯಲ್ಲಿ ಅಭಿವ್ಯಕ್ತಿಸಲಾಗಿದೆ. ವಿಧವೆಯಾದ ಆಕೆಯಲ್ಲಿ ಸುಪ್ತಭಾವನೆಗಳೂ ಹೊರಬರಲು ತವಕಿಸುತ್ತಿದ್ದರೂ ಆಕೆಯ ಭಾವನು ಸ್ಥಿರಪ್ರಜ್ಞೆಯಿಂದ ರಾಗರಹಿತ ವ್ಯಕ್ತಿತ್ವವನ್ನು ತೋರ್ಪಡಿಸಿದಾಗ ಅವಳ ಕಾಮನೆಗಳು ಬತ್ತಿಹೋಗಿ ಭಾವನನ್ನೇ ದೇವರೆಂದು ಭಾವಿಸುತ್ತಾಳೆ. 'ಸಾಲದ ಮಗು'ಕಥೆ ಧಣಿ ಹಾಗೂ ಒಕ್ಕಲುಗಳ ನಡುವಿನ ಕ್ರೌರ್ಯವನ್ನು ಮತ್ತು ಶೋಷಣೆಯನ್ನು ಚಿತ್ರಿಸುತ್ತದೆ. ಕೆಳವರ್ಗದವರ, ವಿಷಮತೆ, ಅಸಾಹಯಕತೆ ಮತ್ತು ದುರಂತವನ್ನು ಮನಕಲಕುವಂತೆ ನಿರೂಪಿಸಲಾಗಿದೆ. 'ಆದರ್ಶ ಸಾಧನೆ' ಕಥೆಯಲ್ಲಿ ಯುವಕನೊಬ್ಬ ಬದುಕಿನ ವಾಸ್ತವತೆಗೆ ಮುಖ ತಿರುಗಿಸಿದಾಗ ಸಿದ್ಧಾಂತ ಆದರ್ಶಗಳನ್ನು ಕೈ ಬಿಡಲು ಕುಂಟು ನೆಪಹುಡುಕುವ ಮೂಲಕ ತನಗೆ ತಾನೇ ವಂಚಿಸಿಕೊಳ್ಳುತ್ತಾನೆ. ಇದರಿಂದ ಆತನ ವ್ಯಕ್ತಿತ್ವ ಹೀನ ಸ್ಥಿತಿಗೆ ತಲುಪುತ್ತದೆ. 'ಔದಾರ್ಯ' ಈ ಕಥೆಯು ಒಬ್ಬ ಮಾಸ್ಟರ ದುಃಖ ಸಂದರ್ಭವನ್ನು ತಿಳಿಸುತ್ತದೆ. ಮಾಸ್ಟರು ತಮ್ಮ ಔದಾರ್ಯ ತನದಿಂದ ಒದಗಿಬಂದ ದುಃಖವನ್ನೆಲ್ಲ ನುಂಗಿದ ನೋವಿನ ಸಂದರ್ಭವನ್ನು ಕಲಾತ್ಮಕತೆಯಿಂದ ನಿರೂಪಿಸಲಾಗಿದೆ. 'ಗಂಟು ಅಥವಾ ಗುಪ್ತಧನ' ಕಥೆಯ ಲೋಭತನವನ್ನು ಚಿತ್ರಿಸಲಾಗಿದೆ. ಹಣದ ಆಸೆಗೆ ಮುಗಿಬಿದ್ದ ವ್ಯಕ್ತಿಯ ದೌರ್ಬಲ್ಯವನ್ನು ಕಪಟ ಸಂನ್ಯಾಸಿಯೊಬ್ಬ ಬಳಸಿಕೊಂಡು ಅವನ ಬಳಿಯಿದ್ದ ಸಂಪತ್ತನ್ನೆಲ್ಲ ದೋಚುವುದು ಕಂಡುಬರುತ್ತದೆ. 'ಮೀನಾಕ್ಷಿಯ ಮನೆ ಮೇಷ್ಟರು' ಕಥೆಯು ಕನ್ನಡದ ಮಹತ್ವದ ಕಥೆಗಳಲ್ಲಿ ಒಂದಾಗಿದೆ. ನವ ಯುವಕ-ಯುವತಿಯ ಪ್ರೇಮಾನುಭೂತಿಯನ್ನು ವಿಸ್ತೃತವಾಗಿ ಚಿತ್ರಿಸುತ್ತದೆ. ಕಥನ ಕಲೆಯ ದೃಷ್ಟಿಯಿಂದ ಒಂದು ಕತೆಗೆ ಇರಬೇಕಾದ ಎಲ್ಲ ಲಕ್ಷಣಗಳು ಇದರಲ್ಲಿ ಕಾಣಿಸಿಕೊಳ್ಳುತ್ತವೆ. ಹೆಣ್ಣಿನ ಪ್ರೇಮದ ಸೆಳೆತಕ್ಕೆ ಸಿಕ್ಕಿದ ಗಂಡಿನ ಮನಸ್ಸಿನ ಒಳತೋಟಿಯಿದೆ. ಅಲ್ಲದೆ ಭಗ್ನಗೊಂಡ ಮನಸ್ಸಿನ ಆತಂಕವೂ ಚಿತ್ರಿತಗೊಂಡಿದೆ. ಕಥಾನಾಯಕನಾದ ಮೇಷ್ಟರ ಆರೋಗ್ಯಪೂರ್ಣ ದೃಷ್ಟಿ ಫಲಿಸಿದೆ. 'ಧನ್ವಂತರಿ ಚಿಕಿತ್ಸೆ' ಕಥೆಯು ರೈತನ ಬದುಕನ್ನು, ಅವನ ಯಾತನೆಯನ್ನು ಅಪೂರ್ವವಾಗಿ ಧ್ವನಿಸುತ್ತದೆ. ಆಧುನಿಕ ಯುಗದಲ್ಲಿ ಶ್ರೀಮಂತ ಭೋಗ ಜೀವನಕ್ಕಾಗಿ ರೈತನ ಶೋಷಣೆಯಾಗುತ್ತಿರುವುದನ್ನು ಚಿತ್ರಿಸಲಾಗಿದೆ. ರೈತನೇ

ಎಲ್ಲರ ಬಾಳಿಗೆ ಜೀವತರಬಲ್ಲ ಶಕ್ತಿ, ಇವನು ಇಡೀ ಜವಾಬ್ದಾರಿಯನ್ನು ಹೊತ್ತಾಗ ಮಾತ್ರ ಸಮೃದ್ಧ ಸಮಾಜವನ್ನು ನಿರ್ಮಾಣ ಮಾಡಬಹುದು ಇಲ್ಲದಿದ್ದರೆ ಶೋಷಣೆ ತಪ್ಪಿದ್ದಲ್ಲ ಎಂಬ ಸೂಕ್ಷ್ಮತೆಗಳನ್ನು ಚಿತ್ರಿಸಲಾಗಿದೆ. ರೈತನ ನರಳುವಿಕೆಯ ಮೂಲಕ ಬಡತನ, ಶೋಷಣೆ, ಅಸಹಾಯಕತೆ, ಬದುಕಿನ ವಿರೋಧಾಭಾಸಗಳು, ವಿಚಿತ್ರತೆಗಳು ತೆರೆದುಕೊಳ್ಳುತ್ತವೆ. ಅಲ್ಲದೆ ನಮ್ಮ ಸಾಮಾಜಿಕ ವ್ಯವಸ್ಥೆಯನ್ನು ವ್ಯಂಗ್ಯವಾಗಿಯೂ ಸಹ ಚಿತ್ರಿಸಲಾಗಿದೆ.

ಮಾಸ್ತಿಯವರ ಸಮಕಾಲೀನ ಪ್ರಮುಖ ಕಥೆಗಾರರಾಗಿ ಕುವೆಂಪು ಕಂಡುಬರುತ್ತಾರೆ. ಇವರು ಮುಖ್ಯವಾಗಿ ಗುರುತಿಸಿಕೊಂಡಿರುವುದು ಕವಿಯಾಗಿ, ಕವಿ ಹೃದಯದ ಮಹೋನ್ನತಿಯನ್ನು ಮುಟ್ಟಿದವರು. ಕಥೆಗಳ ಚಿತ್ರಣದಲ್ಲಿಯೂ ಸಿದ್ಧಹಸ್ತರಾಗಿ ಕಂಡುಬರುತ್ತಾರೆ. ನವೋದಯ ಕಾಲಘಟ್ಟ ಸಂದರ್ಭದಲ್ಲಿ ಇದ್ದ ಸಂಸ್ಕೃತಿ, ಸಂಸ್ಕಾರ, ಆದರ್ಶ, ನ್ಯಾಯ, ಸಜ್ಜನಿಕೆ, ಸರಳತೆ, ತ್ಯಾಗ ಇವುಗಳು ತಮ್ಮ ಕಥೆಗಳನ್ನು ಸ್ಥಾನವನ್ನು ಪಡೆದುಕೊಂಡಿವೆ. ಕೇವಲ ಎರಡೇ ಸಂಕಲನಗಳು ಹೊರಬಂದಿದ್ದರೂ ಅವುಗಳ ಮೂಲಕವೇ ಉತ್ತಮ ಕಥೆಗಾರರಾಗಿ ಗುರುತಿಸಿಕೊಂಡಿದ್ದಾರೆ. ಪ್ರತಿಕಥೆಗಳಲ್ಲಿ ಜೀವನಾನುಭವಗಳು, ಹಾಸ್ಯ-ವ್ಯಂಗ್ಯಗಳು ಕಂಡುಬರುತ್ತವೆ. ಅಲ್ಲದೆ ಕಥೆಗಳನ್ನು ಪ್ರತ್ಯೇಕವಾಗಿ ಚಿಂತನೆಗೆ ಒಳಗುಮಾಡುವಷ್ಟು ಸತ್ವವು ಕಥೆಗಳಲ್ಲಿರುವುದು ಮತ್ತೊಂದು ವಿಶೇಷ. 'ನವೋದಯ ಸಾಹಿತ್ಯ ಯುಗದ ಶ್ರೇಷ್ಠ ಕತೆಗಾರರಲ್ಲಿ ಕುವೆಂಪುರವರು ಒಬ್ಬರು' ಎಂಬ ಮಾತಿನಲ್ಲಿ ಯಾವ ಉತ್ಪ್ರೇಕ್ಷೆಯೂ ಕಂಡುಬರಲಾರದು.

ನವೋದಯ ಕಾಲದ ಕಥೆಗಾರರಲ್ಲಿ ಮಾಸ್ತಿ, ಕುವೆಂಪುರವರಂತೆ ಪ್ರಮುಖ ಕಥೆಗಾರರಾಗಿ ಕಂಡುಬರುವ ಮತ್ತೊಬ್ಬ ವ್ಯಕ್ತಿಯೆಂದರೆ ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರವರು. ಬಯಲುಸೀಮೆಯ ಜನಜೀವನ ಕ್ರಮವನ್ನು ಅಚ್ಚಳಿಯದಂತೆ ತಮ್ಮ ಕಥೆಗಳ ಮೂಲಕ ನೇರವಾಗಿ ಭಟ್ಟಿಯಿಳಿಸಿದ್ದಾರೆ. ಹಳ್ಳಿಯಲ್ಲಿನ ಹಿರಿಯರು, ಆಚಾರಿಗಳು, ದಾಸಯ್ಯಗಳು, ಕೆಲ ಮುಸ್ಲಿಂ ವ್ಯಕ್ತಿಗಳು ಹೀಗೆ ನಾನಾ ಸ್ತರದ ಜನರ ಬದುಕನ್ನು ಬಹಳ ಹತ್ತಿರದಿಂದ ಕಂಡದ್ದಷ್ಟೇ ಅಲ್ಲದೆ ಬರಹ ರೂಪದಲ್ಲಿ ಕಾಣಿಸಿರುವುದು. ಇಂದಿಗೂ ಆಗಿನ ಜನರ ವಿಶಿಷ್ಟತೆಯನ್ನು ತಿಳಿಯಲು ಸಾಧ್ಯವಾಗಿದೆ. ಹಳ್ಳಿಯ ರಸಿಕತನದ ಬದುಕನ್ನು ತಿಳಿಯಾದ ಹಾಸ್ಯದ ಮೂಲಕ ಅನಾವರಣಗೊಳಿಸುತ್ತಲೇ ಅಲ್ಲಿಯ ಬದುಕಿನ ಬಿರುಕುಗಳನ್ನು ಕ್ರೌರ್ಯವನ್ನು ಬಿಂಬಿಸುವ ನಿಟ್ಟಿನಲ್ಲಿ ಗೊರೂರರ ಕಥೆಗಳು ಯಶಸ್ವಿಯಾಗಿವೆ. 'ಹಳೆಯ ಚಿತ್ರಗಳು, ಗರುಡಗಂಬದ ದಾಸಯ್ಯ, ನಮ್ಮ ಊರಿನ ರಸಿಕರು, ಕತೆಗಳು ಮತ್ತು ವಿನೋದ ಚಿತ್ರಗಳು, ಬೆಸ್ತರ ಕರಿಯ, ಹೇಮಾವತಿಯ ತೀರದಲ್ಲಿ ಸಂಕಲನಗಳಲ್ಲಿ ಗೊರೂರ ಕಥೆಗಳು ಕಂಡುಬರುತ್ತವೆ. ನಾಗರಿಕರು ಕನಿಷ್ಠವೆಂದು ತಿಳಿಯುವ ಜನಪದ ಜೀವನದಲ್ಲಿ ಎಂತಹ ಸ್ವಾರಸ್ಯವಿದೆ, ಚೆಲುವಿದೆ ಎಂಬುದನ್ನು ತಮ್ಮ ಬರಹಗಳ ಮೂಲಕ ತಂದಿದ್ದಾರೆ. ಹಾಸ್ಯ ಪ್ರವೃತ್ತಿ ಇವರಲ್ಲಿ ಕಂಡುಬರುತ್ತದೆ. ಈ ಹಾಸ್ಯ ಹೇಗೆ ನಿರರ್ಗಳವೋ ಹಾಗೆ ನಿರ್ಮಲವೂ ಹೌದು. ಅದರ ಹಿಂದೆ ವಂಚನೆಯಾಗಲಿ, ಆಕ್ರೋಶವಾಗಲಿ ಕಂಡುಬರುವುದಿಲ್ಲ. ಬದಿಗೆ ಸಹಾನುಭೂತಿ ಇರುತ್ತದೆ. ಜೀವನವನ್ನು ಜನರನ್ನು ಪ್ರೀತಿಸುವ ಇವರು ಎಲ್ಲ ವರ್ಗದ ಜನರಲ್ಲೂ ಕಂಡುಬರುವ, ಹುಸಿತನ, ಅಜ್ಞಾನ, ಅವಗುಣಗಳನ್ನು ತೀರ ಹತ್ತಿರದಿಂದ ಕಂಡವರು- ಅವುಗಳನ್ನು ಯಾರ ಮನಸ್ಸಿಗೂ ನೋವಾಗದಂತೆ ಹಾಸ್ಯವಿಡಂಬನೆಯ ಮೂಲಕ ತಮ್ಮ ಬರಹದಲ್ಲಿ

ತಂದಿದ್ದಾರೆ. ಗರುಡಗಂಬದ ದಾಸಯ್ಯ ಕೃತಿಯ ಮುನ್ನುಡಿಯಲ್ಲಿ ಬೇಂದ್ರೆಯವರು ಹೀಗೆ ಹೇಳುತ್ತಾರೆ- "ಒಬ್ಬ ಅರಸುಗಳೇ, ಹಜಾಮರೆ, ಹಾರುವರೆ, ತುರುಕರೆ, ದಾಸಯ್ಯಗಳೆ, ಬಯಲಾಟದವರೆ, ಸುಭೇದಾರರೆ, ಶಾನುಭೋಗರೆ, ಹೊಲೆಯರೆ-ಇವರೆಲ್ಲರನ್ನೂ ಒಂದು ಮಾಲೆಯಲ್ಲಿ ಪೋಣಿಸಿದ ವಿಕಟ ಕವಿತ್ವವು ಪ್ರಶಂಸನೀಯವೆಂದು ಯಾರು ಹೇಳಲಿಕ್ಕಿಲ್ಲ ? ಹಾಸ್ಯವು ಸಾಮ್ಯವಾದಿ, ವ್ಯಂಗ್ಯ ಸರಣಿಯ ಗಾದೆ ಮಾತಿನ ಲೇಹ್ಯಗಳು, ಕಟಕಿಯ ಮಾತಿನ ತಿರುಪಿನ ಕಷಾಯಗಳು, ಹಾಸ್ಯಗರ್ಭಿತ, ಉಪಮೆ ದೃಷ್ಟಾಂತಗಳ ಪಾಚಕ ರೇಚಕಗಳು, ಅತಿಶಯೋಕ್ತಿಯ ಗುಳಿಗೆಗಳು, ತತ್ವದ ಭಸ್ಮಗಳು, ಇವೆಲ್ಲವು ಸಾಮಾಜಿಕ ರುಗ್ಮತೆಯನ್ನು ಕಳೆಯುವ ಇವರ ಹಾಸ್ಯವೈದ್ಯದಲ್ಲಿ ಉಚಿತ ಪ್ರಯೋಜನಕಾರಿಯಾದುದನ್ನು ಅಡಿಗಡಿಗೆ ಕಂಡು ಹೀಗೆಯೇ ಈ ಕಲೆಯು ನಮ್ಮ ಜನಮನದ ಕೊಳೆಯನ್ನು ಕಳೆದು ಬೆಳಗುವಂತಾಗಲಿ ಎಂದು ಹರಸುವಂತಾಗುವುದು."[೧] ಗೊರೂರ ಕಲೆ, ಹಾಸ್ಯ ಎರವಲಾದುದಲ್ಲ ಬದಲಿಗೆ ಜಾನಪದ ಜೀವನದಲ್ಲಿ ಹುದುಗಿರುವುದನ್ನು ಬರವಣಿಗೆಯ ಮೂಲಕ ಉಳಿಸಿದ್ದಾರೆ. 'ವಯ್ಯಾರಿ, ಶಿವರಾತ್ರಿ, ಉಸಬು, ಗೋಪುರದ ಬಾಗಿಲು, ಕಮ್ಮಾರ ವೀರಭದ್ರಾಚಾರಿ, ಕನ್ಯಾಕುಮಾರಿ ಮತ್ತು ಇತರ ಕಥೆಗಳು'. ಇವು ಗೊರೂರರ ಮುಖ್ಯ ಕಥಾಸಂಗ್ರಹಗಳು. ಗೊರೂರರ ಕಥೆಗಳನ್ನು ಕುರಿತಂತೆ ಎಲ್. ಎಸ್. ಶೇಷಗಿರಿರಾಯರ ಅಭಿಪ್ರಾಯ ಹೀಗಿದೆ. "ಮುಗ್ಧತೆಗೆ ಸೆರೆಯಾಗದ ಆದರ್ಶತ್ವ, ಸರಳೀಕರಣಕ್ಕೆ ಸೆರೆಯಾಗದ ವಾಸ್ತವಿಕತೆ, ಅನುಕಂಪವನ್ನು ಬಿಡದ ತಿಳಿಹಾಸ್ಯ ಮಾನವ ಸ್ವಭಾವದಲ್ಲಿ ನೈಜವಾದ ಮತ್ತು ಉದಾರವಾದ ಆಸಕ್ತಿ ಇವು ಅವರ ಕಥಾ ಸಾಹಿತ್ಯಕ್ಕೆ ಜೀವವನ್ನು ಬೆಲೆಯನ್ನೂ ತಂದಿವೆ."[೨] (ಗೊರೂರು ಗೌರವ ಗ್ರಂಥ).

ರೊಮ್ಯಾಂಟಿಕ್ ಕಲ್ಪನೆ ನವೋದಯ ಯುಗದ ಮೇಲೆ ಬೀರಿದ ಪ್ರಭಾವದಷ್ಟೇ ದಟ್ಟವಾಗಿ ಮೊದಲು ಪ್ರತಿಭಟನೆ ದನಿ ಕಾಣಿಸಿಕೊಂಡದ್ದು ಪ್ರಗತಿಶೀಲ ಸಾಹಿತ್ಯದಲ್ಲಿ. ಶ್ರೀಸಾಮಾನ್ಯರ ಬದುಕಿನ ನಾನಾ ಸ್ತರಗಳನ್ನು ಸಣ್ಣಕಥೆಗಳ ಮೂಲಕ ಕಂಡಿರಿಸಿದವರು ಪ್ರಗತಿಶೀಲರು. ಸಾಮಾನ್ಯವಾಗಿ ಲೇಖಕನು ಸಾಮಾಜಿಕ ಕ್ರಾಂತಿಹರಿಕಾರನಾಗಬೇಕೆಂಬ ಒಲವು ಇವರಲ್ಲಿ ಕಾಣಿಸಿಕೊಳ್ಳುತ್ತದೆ. ಅಂದಿನ ರಾಜಕೀಯ ಆಗುಹೋಗುಗಳು, ಪ್ರಗತಿಶೀಲತೆಯ ಪ್ರಚಾರ, ರಷ್ಯ ಮತ್ತು ಹಿಂದಿ ಸಾಹಿತ್ಯಗಳ ಪ್ರಭಾವ-ಇವುಗಳು ಪ್ರಗತಿಶೀಲರ ಕಥೆಗಳಲ್ಲಿ ಸಹಜವಾಗಿಯೇ ಸ್ಥಾನಪಡೆದವು. ಶೋಷಣೆಯ ವಿರುದ್ಧ ಪ್ರತಿಭಟನೆ, ಸಾಮಾಜಿಕ ಸಮಸ್ಯೆಗಳ ಬಗ್ಗೆ ಕಾಳಜಿ, ಕೆಳವರ್ಗದ ಬಗ್ಗೆ ಸಹಾನುಭೂತಿ-ಇವೆಲ್ಲವುಗಳು ಪ್ರತಿಶೀಲರ ಬರವಣಿಗೆಯ ಮೂಲಕ ದನಿ ಪಡೆದುಕೊಂಡವು. ಆಡುಮಾತಿನ ಬಳಕೆ ಸಾಹಿತ್ಯ ಹೆಚ್ಚಾಗಿ ಕಂಡುಬರಲಾರಂಭಿಸಿತು. ಪ್ರಗತಿಶೀಲ ಚಳುವಳಿಯ ನೇತೃತ್ವ ವಹಿಸಿದ ಅ.ನ.ಕೃ, ನಿರಂಜನ, ತ.ರಾ.ಸು., ಬಸವರಾಜ ಕಟ್ಟೀಮನಿ, ಚದುರಂಗ-ಇವರುಗಳು ಮುಖ್ಯ ಕತೆಗಾರರಾಗಿ ಕಾಣಿಸಿಕೊಳ್ಳುತ್ತಾರೆ.

ಸಣ್ಣಕಥೆಗಳ ಮೂಲಕ ಪ್ರಗತಿಶೀಲತೆಯನ್ನು ದಟ್ಟವಾಗಿ ತಂದವರಲ್ಲಿ ಅ.ನ.ಕೃ ಕೂಡ ಒಬ್ಬರು. 'ಮಂಚು', 'ಅದೃಷ್ಟ ನಕ್ಷತ್ರ', 'ಅಗ್ನಿಕನ್ಯೆ', 'ಕಾಮನಬಿಲ್ಲು' ಮುಂತಾದ ಕಥಾಸಂಕಲನಗಳನ್ನು ರಚಿಸಿದ್ದಾರೆ. ಅದ್ಭುತವಾದ ಕಥನಕಲೆಯನ್ನು ಸಾಧಿಸಿದ್ದ ಇವರು ಜೀವಂತ ಶೈಲಿಯ ಮೂಲಕ ಸಹೃದಯರನ್ನು ಬೆರಗುಗೊಳಿಸಿದರು. ವೇಶ್ಯಾಸಮಸ್ಯೆ, ಕೋಮುಘರ್ಷಣೆ, ಹಸಿವು, ಶೋಷಣೆ-ಮುಂತಾದ ಅಂಶಗಳನ್ನು ಮುಂದಿಟ್ಟುಕೊಂಡು ಅ.ನ.ಕೃ, ದಿಟ್ಟವಾಗಿ ಬರೆಯತೊಡಗಿದರು. 'ಅನ್ನದಕೂಗು' ಕಥೆ ಹಸಿವಿನ ಉತ್ಕಟತೆಯನ್ನು, 'ಮಣ್ಣಿನ ಮಗ' ಕಥೆಯು

ಜಮೀನುದಾರಿ ವ್ಯವಸ್ಥೆಯ ಹಿನ್ನೆಲೆಯಲ್ಲಿ ನಡೆಯುವ ಶೋಷಣೆಯನ್ನು ಚಿತ್ರಿಸುತ್ತವೆ. ಇವರ ಕಥೆಗಳಲ್ಲಿ ಭಾವುಕ ಸ್ಥಿತಿ ಹೆಚ್ಚಾಗಿ ಕಂಡುಬರುತ್ತದೆ. ತರಾಸು ತಮ್ಮ ಕಥೆಗಳಲ್ಲಿ ತಂತ್ರ ಮತ್ತು ಬರವಣಿಗೆಯ ಸ್ವರೂಪದ ಬಗ್ಗೆ ಕಾಳಜಿ ಇಟ್ಟುಕೊಂಡವರು. ಇವರು ಸುಮಾರು ೨೧ ಕಥೆಗಳನ್ನು ಬರೆದಿದ್ದಾರೆ. 'ತೊಟ್ಟಿಲು ತೂಗಿತು' ಕಥೆಯಲ್ಲಿ ಪ್ರಗತಿಶೀಲ ಪಂಥದ ಧೋರಣೆ ಕಾಣಿಸುತ್ತದೆ. 'ಗಿರಿಮಲ್ಲಿಗೆಯ ನಂದನದಲ್ಲಿ' ಎಂಬ ಕಥಾ ಸಂಗ್ರಹದಲ್ಲಿ ತರಾಸುರವರು ಕಥಾ ಪ್ರತಿಭೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಬದುಕಿನ ಹಲವು ಸಂಕೀರ್ಣ ಮಜಲುಗಳನ್ನು ಬಿಚ್ಚಿಡುತ್ತದೆ. 'ಒಂದು ತುಂಡು ಸುದ್ದಿ' ಕಥೆಯಲ್ಲಿ ನಿರುದ್ಯೋಗಿ ಯುವಕನು ಆತ್ಮಹತ್ಯೆ ಮಾಡಿಕೊಳ್ಳುವ ಚಿತ್ರಣ ಹೃದಯ ವಿದ್ರಾವಕಾಗಿ ಚಿತ್ರಿತಗೊಂಡಿದೆ. 'ಇದೇ ನಿಜವಾದ ಸಂಪತ್ತು' ಎಂಬುದು ತರಾಸುರವರು ಕೊನೆಯ ಕಥಾ ಸಂಗ್ರಹವಾಗಿದೆ. ಕಥೆಗಳಲ್ಲಿ ತೀವ್ರತೆ ಕಂಡುಬಂದರೂ ಕಥೆಯ ವಸ್ತು ಮತ್ತು ಪಾತ್ರಗಳಲ್ಲಿಯ ಸ್ವರೂಪ ಮತ್ತು ವ್ಯಕ್ತಿತ್ವವನ್ನು ಉಳಿಸಿಕೊಂಡ ಕಾರಣ ತರಾಸು ಒಬ್ಬ ಉತ್ತಮ ಕಥೆಗಾರರಾಗಿ ಕಂಡು ಬರಲು ಸಾಧ್ಯವಾಯಿತು. ಸನ್ನಿವೇಶ ಸಂದರ್ಭಗಳಿಗೆ ಅನುಗುಣವಾಗಿ ಪಾತ್ರಗಳನ್ನು ಪೋಷಿಸಿ ಬೆಳೆಸುವ ಸಂಯಮ ಇವರಲ್ಲಿ ಎದ್ದು ಕಾಣುವ ಗುಣವಾಗಿದೆ.

ಪ್ರಗತಿ ಶೀಲ ಸಾಹಿತ್ಯದಲ್ಲಿ ಒಬ್ಬ ಪರಿಣಾಮಕಾರಿಯಾದ ಕಥೆಗಾರರಾಗಿ 'ನಿರಂಜನರು' ಕಾಣಿಸಿಕೊಳ್ಳುತ್ತಾರೆ. ಸುಮಾರು'೯' (ಒಂಬತ್ತು) ಕಥಾಸಂಕಲನಗಳನ್ನು ರಚಿಸಿದ್ದಾರೆ. ತಮ್ಮ ಹರಿತವಾದ ಶೈಲಿಯ ಮೂಲಕ ಬಡತನ, ಶೋಷಣೆ, ಸಾಮಾಜಿಕ ಅನ್ಯಾಯಗಳ ವಿರುದ್ಧ ಹೋರಾಟ ನಡೆಸಿದ್ದಾರೆ. ಇವರ 'ಕೊನೆಯ ಗಿರಾಕಿ' ಒಂದು ಉತ್ತಮವಾದ ಕಥೆಯಾಗಿದೆ. ಹೆಣ್ಣನ್ನು ಕೇವಲ ಭೋಗದ ವಸ್ತು ಎಂದು ಪರಿಗಣಿಸುವ ಸಮಾಜದ ಕ್ರೌರ್ಯವನ್ನು ಯಶಸ್ವಿಯಾಗಿ ಗುರುತಿಸಿದ್ದಾರೆ. 'ನಾಸ್ತಿಕ ಕೊಟ್ಟ ದೇವರು' - ಸಂಕಲನವು ದೇವರು ಧರ್ಮ ಶೋಷಕ ವರ್ಗದವರ ಕೈಯಲ್ಲಿರುವುದರಿಂದ ಆಗುತ್ತಿರುವ ಶೋಷಣೆಗಳನ್ನು ಚಿತ್ರಿಸುತ್ತದೆ. ದೀನದಲಿತರ ಬಗ್ಗೆ ಸಹಾನುಭೂತಿ, ಸೂಕ್ಷ್ಮ ಸಂವೇದನೆ, ವೈಚಾರಿಕತೆ, ನವಿರಾದ ವಿಡಂಬಣೆ-ಇನ್ನು ಮುಂತಾದ ಗುಣಗಳು ನಿರಂಜನರ ಕಥೆಗಳಲ್ಲಿ ಮೂಡಿಬಂದಿರುವುದು ಮೆಚ್ಚಿಕೊಳ್ಳಬಹುದು. ಕನ್ನಡದ ಜೀವಂತ ಜ್ವಾಲಾಮುಖಿಯೆನಿಸಿದ ಕಟ್ಟಿ ಮನಿಯವರು ಹತ್ತು ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ವಸ್ತು-ವೈವಿಧ್ಯ, ಪಾತ್ರ-ಚಿತ್ರಗಳು ಇವರಲ್ಲಿ ವಿಶಾಲವಾದ ಹರವನ್ನು ಪಡೆದುಕೊಂಡಿವೆ. ಹಳ್ಳಿಯ ಜನರ ಮುಗ್ಧತೆ, ಪ್ರೇಮ, ಛಲಗಾರಿಕೆ ಮುಂತಾದ ಅಂಶಗಳು ಕಟ್ಟೀಮನಿಯವರ ರಚನೆಯ ವಸ್ತುಗಳಾಗಿವೆ. ಮುಗ್ಧತೆಯನ್ನು ಶೋಷಿಸುವ ವರ್ಗದ ವಿರುದ್ಧ ಆಕ್ರೋಶವನ್ನು ಚಿತ್ರಿಸಿದ್ದಾರೆ. ವಸ್ತು ನಿರೂಪಣೆ, ಪಾತ್ರ ನಿರೂಪಣೆಗಳಲ್ಲಿ ಮಾನವೀಯತೆ ಹಾಗೂ ಅನುಕಂಪಶೀಲತೆಯ ದೃಷ್ಟಿ ಪ್ರಧಾನವಾಗಿ ಕಂಡುಬರುತ್ತದೆ. 'ಬೂಟ್‌ಪಾಲಿಷ್' 'ಗಿರಿಜ ಕಂಡ ಸಿನಿಮಾ', 'ಅಜ್ಞಾತ ವಾಸ' ಕಥೆಗಳಲ್ಲಿ ಶೋಷಣೆ, ಅನೈತಿಕತೆಯ ಚಿತ್ರಣಗೊಂಡಿವೆ. ಸಾಮಾಜಿಕ ನ್ಯಾಯ ಮತ್ತು ಸಾಮಾಜಿಕ ಶೋಷಣೆಯ ಪ್ರತಿಪಾದನೆಯನ್ನು ತಮ್ಮ ಕಥೆಗಳ ಮೂಲಕ ನಿರೂಪಿಸಿದ್ದಾರೆ. 'ಜೀವನಕಲೆ' ಕಥೆಯಲ್ಲಿ ಕಲೆ ಮತ್ತು ನಿಜಜೀವನದ ನಡುವಿನ ಸಂಬಂಧ ನಿರೂಪಿತಗೊಂಡಿದೆ. ಉತ್ತರ ಕರ್ನಾಟಕದ ಜನಜೀವನ ಸಂದರ್ಭಗಳು ಕಟ್ಟೀಮನಿಯವರ ಕಥೆಗಳಲ್ಲಿ ಸಹಜವಾಗಿಯೇ ಸ್ಥಾನ ಪಡೆದುಕೊಂಡಿವೆ. ಕನ್ನಡದಲ್ಲಿ ಚದುರಂಗರ ಕಥೆಗಳು ಸಹ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿವೆ. 'ಸ್ವಪ್ನಸುಂದರಿ, ಶವದಮನೆ, ಇಣುಕುನೋಟ, ಬಂಗಾರದ ಗೆಜ್ಜೆ, ಮೀನಿನ ಹೆಜ್ಜೆ, ಬಣ್ಣದ ಬೊಂಬೆ'- ಮುಂತಾದ ಕಥಾ ಸಂಕಲನಗಳನ್ನು ರಚಿಸಿದ್ದಾರೆ. 'ಶವದ ಮನೆ'

ಕಥೆಯಲ್ಲಿ ಆಸ್ಪತ್ರೆಗಳ ಬಡವರ ಪಾಲಿಗೆ ಶವದ ಮನೆಯಾಗಿಯೇ ಉಳಿಯುವ ವ್ಯಂಗ್ಯವನ್ನು ಇಂದಿನ ಸಾಮಾಜಿಕ ಅನ್ಯಾಯಗಳ ನಡುವೆ ಬದುಕುವುದಕ್ಕಿಂತ ಸಾಯುವುದೇ ವಾಸಿ ಎಂಬ ವೈಚಿತ್ರ್ಯವನ್ನು ಚಿತ್ರಿಸಿದ್ದಾರೆ. 'ನಾಲ್ಕು ಮೊಳ ಭೂಮಿ' ಕಥೆಯು ಕಥೆಯೊಳಗೊಂದು ಕಥೆಯ ತಂತ್ರವನ್ನು ಬಳಸಿಕೊಂಡು ಒಮ್ಮೆಗೆ ನಗರ ಮತ್ತು ಗ್ರಾಮ್ಯ ಬದುಕುಗಳಲ್ಲಿನ ಲೋಭ ಮತ್ತು ಅನ್ಯಾಯಗಳನ್ನು ಅನಾವರಣಗೊಳಿಸುತ್ತವೆ. ಇಂದಿಗೂ ಇದು ಕನ್ನಡದ ಮಹತ್ತರ ಕಥೆಗಳಲ್ಲಿ ಒಂದಾಗಿದೆ. 'ಅಂಕ', 'ಕ್ವಾಟೆ', ಕಥೆಗಳಲ್ಲಿ ಮನೋವೈಜ್ಞಾನಿಕ ಅಂಶಗಳು ಬಿಂಬಿತಗೊಂಡಿವೆ. ಸುಮಾರು ಒಂದು ದಶಕಕ್ಕಿಂತಲೂ ಹೆಚ್ಚು ಕಾಲ ಚಾಲ್ತಿಯಲ್ಲಿದ್ದ ಪ್ರಗತಿಶೀಲ ಚಳುವಳಿ ಕನ್ನಡ ಸಣ್ಣಕಥೆಗೆ ಸಾಕಷ್ಟು ಭೂಮಿಕೆಯನ್ನು ಒದಗಿಸಿದೆ. ಈ ಕಥೆಗಾರರು ಕಲೆಗೆ ಸಾಕಷ್ಟು ಗಮನ ನೀಡಿರುವುದು ಕಂಡುಬರುತ್ತದೆ. ಸಾಮಾನ್ಯ ಬದುಕಿನ ತುಣುಕು ವಿಸ್ತಾರವಾಗಿ ಕಾಣಿಸಿಕೊಳ್ಳುವುದರೊಂದಿಗೆ ಸಹಜ ಭಾಷೆಯಲ್ಲಿ ಬಿಂಬಿತವಾಗಿದೆ.

ಆಧುನಿಕ ಕನ್ನಡ ಕಥಾ ಸಾಹಿತ್ಯದಲ್ಲಿ ನವ್ಯ ಸಂದರ್ಭವು ಒಂದು ಅಪೂರ್ವ ಕೊಡುಗೆಯಾಗಿದೆ. ಕೃತಿ, ವಸ್ತು, ವಿನ್ಯಾಸ, ಪಾತ್ರಗಳು, ಭಾಷಾಶೈಲಿ, ರಚನಾತಂತ್ರ, ಮಾನಸಿಕ ಹಾಗೂ ನೈತಿಕ ಪ್ರಜ್ಞೆಯ ವಿಸ್ತರಣೆ, ಆತ್ಮಶೋಧನೆ, ಕೃತಿಕಾರನ ತಾತ್ವಿಕ ದೃಷ್ಟಿ-ಇನ್ನೂ ಮುಂತಾದ ಕಲೆಗಳು ನವ್ಯಕಥೆಗಳಿಗೆ ತಳಹದಿಯನ್ನು ಒದಗಿಸಿವೆ. ಪರಿಸರ, ಜನಜೀವನದ ರೀತಿನೀತಿ, ನಗರ ಜೀವನದ ಸಂಕೀರ್ಣತೆ, ಗೊಂದಲಗಳು, ಕೌಟುಂಬಿಕ ವಿಘಟನೆಗಳು ಮುಂತಾದವುಗಳ ಬಗ್ಗೆ ಕನ್ನಡದ ನವ್ಯ ಕಥೆಗಳು ಅಭಿವ್ಯಕ್ತಿಯನ್ನು ಪಡೆದುಕೊಂಡಿವೆ. ಭಾಷೆಯು ಪ್ರತಿಮೆ, ಪ್ರತೀಕ, ರೂಪಕಗಳನ್ನು ಅಳವಡಿಸಿಕೊಂಡು ಬಂದಿದೆ. ಬದುಕಿನ ಎಲ್ಲಾ ವೈವಿಧ್ಯವು ಇಲ್ಲಿ ಮೂರ್ತರೂಪವನ್ನು ಪಡೆದುಕೊಂಡಿರುವುದು ಈ ಸಾಹಿತ್ಯದ ವೈಶಿಷ್ಟ್ಯವಾಗಿದೆ. ಅಸ್ತಿತ್ವವಾದ ಮತ್ತು ಮಾನವಶಾಸ್ತ್ರಗಳ ಪ್ರಭಾವವನ್ನು ನವ್ಯಕಥೆಗಳು ಮೈಗೂಡಿಸಿಕೊಂಡಿವೆ. ನವ್ಯತೆ ಎಂಬುದು ಒಟ್ಟು ಸಮಾಜದ, ಸಂಸ್ಕೃತಿಯ ಸಂಕೀರ್ಣತೆಗಳನ್ನೆಲ್ಲಾ ಒಳಗೊಂಡ ಒಂದು ವಿಶಿಷ್ಟ ಪರಿಕಲ್ಪನೆ ಸಂದರ್ಭ ಇದಾಗಿದೆ. ವಾಸ್ತವತೆ ಮತ್ತು ಆದರ್ಶಗಳ ನಡುವಿನ ಸಂಬಂಧದ ಸಮಸ್ಯೆಯ ಶೈಲಿಯ ಶೋಧನೆ ಬಹುಮುಖ್ಯವಾಗಿ ಕಂಡುಬರುತ್ತದೆ. ಪಾಶ್ಚಾತ್ಯ ಲೇಖಕರ ಪ್ರಭಾವಕ್ಕೂ ಕನ್ನಡದ ನವ್ಯ ಕಥೆಗಾರರು ಒಳಗಾಗಿ ರಚಿಸಿದ್ದಾರೆ. ಅನಂತಮೂರ್ತಿ, ರಾಮಚಂದ್ರಶರ್ಮ, ಯಶವಂತ ಚಿತ್ತಾಲ, ಲಂಕೇಶ, ಶಾಂತಿನಾಥದೇಸಾಯಿ, ತೇಜಸ್ವಿ ಮುಂತಾದವರು ಈ ಯುಗದ ಪ್ರಮುಖ ಕಥೆಗಾರರಾಗಿದ್ದಾರೆ. ನವ್ಯಕಥಾ ಸಾಹಿತ್ಯದ ಪ್ರವರ್ತಕರಲ್ಲಿ ರಾಮಚಂದ್ರಶರ್ಮರು ಒಬ್ಬರು. ವ್ಯಕ್ತಿ, ಸಮಾಜ, ಮದುವೆ, ಪ್ರೇಮ, ಪ್ರಣಯ, ಕಾಮ, ಅಸ್ಪೃಶ್ಯತೆ, ಅಸಮಾನತೆ-ಮುಂತಾದ ಸಮಸ್ಯೆಗಳನ್ನು ಇವರ ಕಥೆಗಳು ವಸ್ತುವಾಗಿ ಒಳಗೊಂಡಿವೆ. ವ್ಯಕ್ತಿಯ ಮನಸ್ಸಿನ ಹೊಯ್ದಾಟವನ್ನು 'ಸೆರಗಿನ ಕೆಂಡ', 'ಯಾರು ಹಿತವನು ನಿನಗೆ' ಕಥೆಗಳು ಚಿತ್ರಿಸುತ್ತವೆ. 'ಮಂದಾರ ಕುಸುಮ, ಒಂದು ಪ್ರಣಯ ಪ್ರಸಂಗ, ಏಳನೇಯ ಜೀವ', ಕಥೆಗಳಲ್ಲಿ ಪ್ರತಿಮೆ, ಸಂಕೇತಗಳ ಬಳಕೆಯನ್ನು ಕಾಣಬಹುದು. 'ಕೊಡತಿಹುಳ, ಐದನೆಯವನು'-ಕಥೆಗಳು ಮನುಷ್ಯನ ಮೂಲ ಭೂತ ಸಮಸ್ಯೆ ಹಾಗೂ ಶಕ್ತಿಯಾದ ಕಾಮದ ಒಳಸತ್ವಗಳನ್ನು ಶೋಧಿಸುತ್ತವೆ. ಮನುಷ್ಯನ ಮೂಲಭೂತವಾದ ಕಾಮ, ಸಾವು, ನೋವು ಮುಂತಾದ ಮೂಲ ಪ್ರವೃತ್ತಿಗಳನ್ನು ಮಾನವೀಯ ಅನುಕಂಪದಿಂದ ಚಿತ್ರಿಸುವಲ್ಲಿ ಶರ್ಮರ ಕಥೆಗಳು ಸಫಲವಾಗಿವೆ. ಈ ಯುಗದಲ್ಲಿ ಯಶವಂತ ಚಿತ್ತಾಲರು ಪ್ರಯೋಗಶೀಲ ಕಥೆಗಾರರಾಗಿ ಕಾಣಿಸಿಕೊಳ್ಳುತ್ತಾರೆ. ಮಾನವಶಾಸ್ತ್ರ, ಮನೋವಿಜ್ಞಾನ, ವಿಕಾಸವಾದ ಮಾರ್ಕ್ಸ್‌ವಾದ-ಹಲವಾರು ಜ್ಞಾನಕ್ಷೇತ್ರಗಳ ವಿಚಾರದಿಂದ ಪ್ರಭಾವಗೊಂಡು ಕಥೆಗಳನ್ನು ರಚಿಸಿದ್ದಾರೆ.

'ಅದೃಷ್ಟ, ಪಯಣ, ಆಟ, ಕಥೆಗಳಲ್ಲಿ ಸಾವು ಮುಖ್ಯ ವಸ್ತುವಾಗಿದೆ. ಛಲ, ಸಂದರ್ಶನ, ಆಬೋಲಿನ, ಕತೆಯಾದಳು ಹುಡುಗಿ, ಬೇನ್ಯಾ- ಮುಂತಾದ ಮಹತ್ತರ ಕಥೆಗಳನ್ನು ನೀಡಿದ್ದಾರೆ. ಬದುಕಿನ ಅಸಂಗತತೆ, ಹಿಂಸೆ ಮತ್ತು ಸಾವುಗಳ ಅನಿವಾರ್ಯತೆ ಜೀವನದಲ್ಲಿ ಎದುರಾಗುವ ಸೋಲನ್ನು ಎದುರಿಸಿ ನಿಲ್ಲಲು ಪ್ರಯತ್ನಿಸುವ ಮಾನವನ ವ್ಯಕ್ತಿತ್ವ ಇವುಗಳನ್ನು ಚಿತ್ತಾಲರು ತಮ್ಮ ಕಥೆಗಳಲ್ಲಿ, ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ವಿಶ್ಲೇಷಿಸಿದ್ದಾರೆ. ಸಣ್ಣಕಥಾ ಮಾಧ್ಯಮವನ್ನು ಹೊಸ ಸಂವೇದನೆಯ ಅಭಿವ್ಯಕ್ತಿ ಮಾಧ್ಯಮವಾಗಿ ಬಳಸಿಕೊಂಡ ಕಥೆಗಾರ ಎಂದರೆ ಅನಂತಮೂರ್ತಿ. ಇವರ ಕಥೆಗಳ ನಾಯಕರು ದ್ವಂದ್ವಗಳನ್ನು, ಗೊಂದಲಗಳನ್ನು ಎದುರಿಸುತ್ತಾರೆ. ಅನುಭವ ಮತ್ತು ತಿಳಿವಳಿಕೆಯ ಆತ್ಮನಿಷ್ಠತೆ ಇವರ ಕತೆಗಳಲ್ಲಿ ಕಂಡುಬರುತ್ತದೆ. ಸಮಕಾಲೀನ ಇತಿಹಾಸ ಭಾಗಗಳೇ ಇವರ ಕತೆಗಳು ಎನ್ನಬಹುದು. ಹುಲಿಯ ಹೆಂಗರುಳು, ತಾಯಿ, ಎಂದಿಗೂ ಮುಗಿಯದ ಕಥೆ, ನವಿಲುಗಳು, ಸೂರ್ಯನ ಕುದುರೆ, ಪ್ರಶ್ನೆ, ಮೌನಿ, ಆಕಾಶ ಮತ್ತು ಬೆಕ್ಕು, ಕ್ಲಿಪ್ ಜಾಯಿಂಟ್, ಘಟಶ್ರಾದ್ಧ, ಪ್ರಕೃತಿ ಪ್ರಸ್ತ ಮುಂತಾದ ಕಥೆಗಳನ್ನು ರಚಿಸಿದ್ದಾರೆ. ಕಾರ್ತಿಕ, ಪ್ರಶ್ನೆ, ಖೋಜರಾಜ, ಘಟಶ್ರಾದ್ಧ ಕಥೆಗಳಲ್ಲಿ ಜೀವನದ ದಟ್ಟವಾದ ಅನುಭವಗಳು ಹೊಸ ಸಂವೇದನೆಯ ನೆಲೆಯಲ್ಲಿ ರೂಪತಾಳಿವೆ. ಇವರ ಕಥೆಗಳಲ್ಲಿ ವಸಾಹತುಶಾಹಿ ಮತ್ತು ದೇಸಿ ಸಂಸ್ಕೃತಿಯ ನಡುವೆ ಘರ್ಷಣೆಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಹಳ್ಳಿಗಾಡಿನ ಬ್ರಾಹ್ಮಣ ಕುಟುಂಬಗಳ ಪರಿಸರವನ್ನು ಇವರ ಕಥೆಗಳು ಸಾಮಾನ್ಯವಾಗಿ ಅನಾವರಣಗೊಳಿಸಿವೆ.

ಅಸಾಧಾರಣ ಗದ್ಯ ಶೈಲಿಯನ್ನು ರೂಢಿಸಿಕೊಂಡು ಸೂಕ್ಷ್ಮವಾದ ಭಾವನೆಗಳನ್ನು ಹಿಡಿದಿಡುವಲ್ಲಿ ಯಶಸ್ವಿಯಾದ ಕಥೆಗಾರರೆಂದರೆ ಲಂಕೇಶ್‌ರವರು. ಮಾನವನ ಮೂಲಭೂತ ಪ್ರವೃತ್ತಿಗಳನ್ನು ಶೋಧಿಸುವುದೇ ಇವರ ಕಥೆಗಳಲ್ಲಿಯ ವಸ್ತು. ಕನ್ನಡದ ಸಣ್ಣಕಥೆಯಲ್ಲಿ ಭಾವಗೀತೆಯ ತೀವ್ರತೆ ಹಾಗೂ ಸೂಕ್ಷ್ಮತೆಗಳನ್ನು ತಂದ ಖ್ಯಾತಿಗೆ ಲಂಕೇಶರು ಪಾತ್ರರಾಗುತ್ತಾರೆ. 'ನಾನಲ್ಲ', 'ಕೆರೆಯ ನೀರನ್ನು ಕೆರೆಗೆ ಚೆಲ್ಲಿ', 'ಉಮಾಪತಿ ಸ್ಕಾಲರ್‌ಶಿಪ್ ಯಾತ್ರೆ - ಮುಂತಾದ ಸಂಕಲನಗಳಲ್ಲಿ ಕಥೆಗಳು ಮೈದಳೆದಿವೆ. 'ರೊಟ್ಟಿ' ಕಥೆಯಲ್ಲಿ ಕಥೆಗಾರರು ಕಲೆಗಾರಿಕೆಯ ಮೈಲಿಗಲ್ಲನ್ನು ಸೃಷ್ಟಿಸಿದ್ದಾರೆ. ವಾಮನ, ನಿವೃತ್ತರು, ಕಥೆಗಳಲ್ಲಿ ಮನುಷ್ಯನ ಸಣ್ಣತನಗಳನ್ನು ವಿವಿಧ ದೃಷ್ಟಿಕೋನಗಳಿಂದ ಚಿತ್ರಿಸಿದ್ದಾರೆ. ಲಂಕೇಶರ ಮನೋಭೂಮಿಕೆ ಗ್ರಾಮೀಣ ಪರಿಸರದ ಕಡೆ ವಾಲುವುದನ್ನು 'ಜೊತೆಗಾರ' ಕಥೆಯಲ್ಲಿ ಕಾಣಬಹುದು. ಧರ್ಮ, ನಿರೀಶ್ವರವಾದ, ಸಮಾಜವಾದ, ರಾಜಕಾರಣ, ಮನುಷ್ಯರ ದ್ವಂದ್ವವ್ಯಕ್ತಿತ್ವ, ಪೊಳ್ಳುತನಗಳನ್ನೇ ಈ ಕಥೆಯು ಶೋಧಿಸುತ್ತದೆ. 'ಕಲ್ಲು ಕರಗುವ ಸಮಯ' ಕಥೆಯು ಸಾಮಾಜಿಕ ತಿಳುವಳಿಕೆಗೆ ಸಾಕ್ಷಿಯಾಗಿದೆ. ಕಥೆಯಿಂದ ಕಥೆಗೆ ಹಂತಹಂತವಾಗಿ ಬೆಳೆಯುತ್ತಾ ಬಂದ ಲಂಕೇಶರು ಕನ್ನಡದ ಕಥಾ ಸಾಹಿತ್ಯಕ್ಕೆ ಹೊಸ-ಹೊಸ ಕಾಳಜಿಗಳನ್ನು ಸೃಷ್ಟಿಸಿದ್ದಷ್ಟೇ ಅಲ್ಲ ಶ್ರೀಮಂತಿಕೆಗೂ ಕಾರಣರಾಗಿದ್ದಾರೆ. ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ ಮಾರ್ಗಗಳನ್ನು ಮೈಗೂಡಿಸಿಕೊಂಡು ಗ್ರಾಮೀಣ ಬದುಕನ್ನು, ಹಸನಾಗಿ ಚಿತ್ರಿಸಿದ ಕಥೆಗಾರರಲ್ಲಿ ಬೆಸಗರಹಳ್ಳಿ ರಾಮಣ್ಣ ಕೂಡ ಒಬ್ಬರು. 'ಜೀತ, ಸ್ವಾರ್ಥ, ಗರ್ಜನೆ', ಮುಂತಾದ ಕಥೆಗಳಲ್ಲಿ ಯಜಮಾನಿಕೆಯ ಕ್ರೌರ್ಯವನ್ನು, ಅನೈತಿಕ ಸಂಬಂಧ, ಅಸಹಜತೆಗಳನ್ನು ಚಿತ್ರಿಸಿದ್ದಾರೆ. 'ಗಾಂಧಿ' ಎಂಬುದು ಪ್ರಸಿದ್ಧ ಕಥೆಗಳಲ್ಲಿ ಒಂದು. ಬದುಕು ಮತ್ತು ಸಾವಿನ ಬಗ್ಗೆ ಹೊಸ ಸಾಧ್ಯತೆಗಳನ್ನು ವಿಶದಪಡಿಸುತ್ತದೆ.

ನವ್ಯರ ಧೋರಣೆಗಳು ಪ್ರಬಲವಾಗಿದ್ದ ಸಂದರ್ಭದಲ್ಲಿ ಅದೇ ಧಾಟಿಯಲ್ಲಿ ಕಥೆಗಳನ್ನು ರಚಿಸಲು ಮುಂದಾದ ಪ್ರಮುಖರಲ್ಲಿ ಪೂರ್ಣ ಚಂದ್ರ ತೇಜಸ್ವಿ ಮುಖ್ಯರಾಗುತ್ತಾರೆ. ಜನ ಸಾಮಾನ್ಯರ ಜೀವನ

ಕ್ರಮದ ಹಿಂದಿರುವ ಶಕ್ತಿಗಳ ವಸ್ತು ನಿಷ್ಠತೆಗಳ ಅರ್ಥೈಸುವಿಕೆಯೇ ತೇಜಸ್ವಿಯವರ ಆಶಯ. ಕನ್ನಡ ಕಥಾ ರಚನೆಗಳ ದಿಕ್ಕನ್ನು ಅನುಭವ ಹಾಗೂ ಅಭಿವ್ಯಕ್ತಿಯ ಸಾಧ್ಯತೆಗಳ ಹಿನ್ನಲೆಯಲ್ಲಿ ವಿಸ್ತರಿಸಿದ ಶ್ರೇಯಸ್ಸು ತೇಜಸ್ವಿಯವರಿಗೆ ಸಲ್ಲುತ್ತದೆ. ಆರಂಭದಲ್ಲಿ ಮಲೆನಾಡಿನ ಪರಿಸರದಿಂದ ವಸ್ತುವನ್ನು ಆಯ್ದುಕೊಂಡರೂ ವಿಶಿಷ್ಟ ದರ್ಶನವೊಂದನ್ನು ಕಾಣಿಸುವ ಪ್ರಯತ್ನ ಮಾಡಿದರು. 'ಗಾಂಧೀಜಿಯ ದೆಸೆಯಿಂದ', 'ಲಿಂಗಬಂಧ' ಕಥೆಗಳು ಮೇಲಿನ ಅಂಶದ ದೃಷ್ಟಿಯಿಂದ ಗಮನಾರ್ಹವಾಗಿದೆ. ಮಲೆನಾಡಿನ ಸ್ವಾರಸ್ಯಕರ ಪರಿಸರದ ಹಿನ್ನಲೆಯಿಂದ ಮೂಡಿ ಬಂದ ಮತ್ತೊಂದು ಕಥೆ ಎಂದರೆ 'ಗುಡುಗು ಹೇಳಿದ್ದೇನು'. ಇದು ಹಾಸ್ಯ ಪ್ರವೃತ್ತಿ ಮತ್ತು ಕಥನ ಕೌಶಲ್ಯಕ್ಕೆ ಸಾಕ್ಷಿಯಾಗಿದೆ. ಊರ್ವಶಿ ಮತ್ತು ಹುಲಿಯೂರಿನ ಸರಹದ್ದು ವಿಶಿಷ್ಟ ಕಥೆಗಳಾಗಿ ಕಂಡುಬರುತ್ತವೆ. 'ಅಬಚೂರಿನ ಪೋಸ್ಟಾಪೀಸು' ಕಥೆಯು ವಿಶಿಷ್ಟವಾದ ಪ್ರಯೋಗಶೀಲ ಕತೆಯನ್ನು ಒಳಗೊಂಡಿದೆ. 'ತಬರನ ಕಥೆ', ನೇರ ನಿರೂಪೆಯಾದರೆ 'ಕುಬಿ ಮತ್ತು ಇಯಾಲ' ಕಥೆಯಲ್ಲಿ ಸಮಾಜದ ಅವನತಿಯ ಚಿತ್ರಣವನ್ನು ಕಾಣಬಹುದು. ಬದುಕಿನ ಸೂಕ್ಷ್ಮಗಳಲ್ಲಿ ಗಂಭೀರ ಸಮಸ್ಯೆಗಳನ್ನು ಅತ್ಯಂತ ಸರಳ ಸುಂದರವಾಗಿ ನಿರೂಪಿಸುವುದು ತೇಜಸ್ವಿಯವರ ಕಥನ ಕ್ರಮದ ವೈಶಿಷ್ಟ್ಯವಾಗಿದೆ. ಮಹತ್ತರವಾದ ಕಥೆಗಳಲ್ಲಿ 'ಕಿರಗೂರಿನ ಗೈಯ್ಯಾಳಿಗಳು' ಒಂದು. ಹೊಸ ಆಶಯ ಹಾಗೂ ಗುರಿಯನ್ನು ಸಾಧಿಸಿದೆ. 'ಪರಿಸರದ ಕತೆಗಳು', ಭೈರ ಮತ್ತು ಮಾಸ್ತ, ಸುಶ್ಮಿತ ಮತ್ತು ಹಕ್ಕಿಮರಿ, ಕಿವಿಯೊಡನೆ ಒಂದು ದಿನ' ಗಮನಾರ್ಹವಾದ ಕಥೆಗಳನ್ನು ನೀಡಿದ್ದಾರೆ. ಬದುಕಿನ ದುರಂತ ಮತ್ತು ಹಾಸ್ಯಗಳೆರಡೂ 'ಯಮಳ ಪ್ರಶ್ನೆ'ಯಲ್ಲಿ ನಿರೂಪಿತವಾಗಿವೆ. ನವ್ಯದ ಧೋರಣೆಗಳಿಗೆ ಬೆನ್ನು ತಿರುಗಿಸಿದ ತೇಜಸ್ವಿಯವರು ಎಂಬತ್ತರ ದಶಕದ ಅನಂತರ ಬಂಡಾಯ ಧೋರಣೆಗಳನ್ನು ಮೈಗೂಡಿಸಿಕೊಂಡು ಬರೆಯಲಾರಂಬಿಸಿದರು. 'ಅಬಚೂರಿನ ಪೋಸ್ಟಾಫೀಸು' ಕಥಾ ಸಂಕಲನಕ್ಕೆ ೧೯೭೩ ರಲ್ಲಿ 'ಹೊಸದಿಗಂತದ ಕಡೆಗೆ' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಸ್ತಾವನೆಯನ್ನು ಬರೆಯುತ್ತಾ ಈ ರೀತಿ ಅಭಿಪ್ರಾಯ ಪಡುತ್ತಾರೆ. ನವ್ಯ ಸಾಹಿತ್ಯದ ಸೋಲಿಗೆ ಕೆಲ ಕಾರಣಗಳನ್ನು ಕೊಡುತ್ತಾರೆ. "ಯಾಂತ್ರಿಕವಾಗಿರುವ ನವ್ಯ ಸಾಹಿತ್ಯದ ಸಾಂಕೇತಿಕತೆ, ಶೈಲಿ ತಂತ್ರಗಳು ; ಅದರ ಸೃಷ್ಟಿಗೆ ಕಾಲೇಜಿನಲ್ಲಿ ಪಾಠ ಮಾಡುವ ಉಪಾಧ್ಯಾಯರೇ ಹೆಚ್ಚಾಗಿರುವ ಸಾಹಿತಿಗಳ ವರ್ಗ ; ಕೇವಲ ಸಾಹಿತ್ಯಕ್ಕಷ್ಟೇ ಸೀಮಿತಗೊಂಡ ಅದರ ಕ್ರಾಂತಿಕಾರಕತನ ಹೀಗೆ ನವ್ಯ ಸಾಹಿತ್ಯ ತನ್ನ ಸೋಲನ್ನು ತಲುಪುವ ಹೊತ್ತಿಗೆ ಅದರೊಳಗಿನಿಂದಲೇ ದಲಿತ-ಬಂಡಾಯದ ಮೊಳಕೆಯೊಡೆಯುವುದಕ್ಕೆ ಶುರುವಾದವು"[೩] ಎಂದಿದ್ದಾರೆ. (ತೇಜಸ್ವಿ, ಕೃತಿ-ಅಬಚೂರಿನ ಪೋಸ್ಟಾಫೀಸು, ಮುನ್ನುಡಿ)

ಬಂಡಾಯ-ದಲಿತ ಸಾಹಿತ್ಯ ಚಳುವಳಿ ಸಾಮಾನ್ಯವಾಗಿ ಸಾಂಸ್ಕೃತಿಕ ಕ್ಷೇತ್ರವನ್ನು ಇನ್ನೂ ವಿಸ್ತರಿಸುವ ನಿಟ್ಟಿನಲ್ಲಿ ಹುಟ್ಟಿ ಬಂದಿರುವಂತಹದು. ಬರಹಗಾರನಿಗೆ ಸಾಮಾಜಿಕ, ರಾಜಕೀಯ ಪ್ರಜ್ಞೆ ಇರಲೇಬೇಕೆಂಬ ವಾದವನ್ನು ಮುಂದಿಟ್ಟಿದೆ. ಸಮಾಜದಲ್ಲಿಯ ಅಸ್ಪೃಶ್ಯತೆ, ಜಾತಿ ಪದ್ಧತಿ, ಲಿಂಗಭೇದ, ನೀತಿಯ ವಿರುದ್ಧ ಪ್ರತಿಭಟನೆ ಮೊದಲಿಗೆ ಕಂಡುಬಂದದ್ದು ಈ ದಲಿತ ಸಾಹಿತ್ಯದಲ್ಲಿಯೇ. ನೊಂದವರ, ಅವಮಾನಕ್ಕೆ ಒಳಗಾದವರ, ಅತ್ಯಂತ ಕೆಳವರ್ಗದ ಜನರ ಪರವಾದ ನಿಲವು ಕಂಡುಬರುತ್ತದೆ. ಆರ್ಥಿಕ, ಸಾಮಾಜಿಕ, ರಾಜಕೀಯ, ಶೋಷಣೆಗೆ ಗುರಿಯಾದವರ ಪರವಾದ ದನಿ ಇದಾಗಿದೆ. 'ಖಡ್ಗವಾಗಲಿ ಕಾವ್ಯ, ಜನರ ನೋವಿಗೆ ಮಿಡಿಯುವ ಪ್ರಾಣಮಿತ್ರ' ಎಂಬುದು ಈ ಸಾಹಿತ್ಯದ ಮುಖ್ಯ ಧೋರಣೆಯಾಗಿದೆ. ಎಂಬತ್ತರ ದಶಕದಿಂದ ತೇಜಸ್ವಿಯವರು ನವ್ಯಮಾರ್ಗವನ್ನು ಬಿಟ್ಟು ಬೇರೆ ರೀತಿಯಲ್ಲಿ ಬರೆಯಲು ಆರಂಭಿಸಿದರು. ಇತರ ಲೇಖಕರು

ಹಾಗೂ ದಲಿತ ಲೇಖಕರೂ ಇದಕ್ಕೆ ದನಿಗೂಡಿಸಿದರು. ಗ್ರಾಮೀಣ ಜಗತ್ತಿನಲ್ಲಿ ದಲಿತರ ಮೇಲೆ ಮೇಲುವರ್ಗದವರಿಂದ ನಡೆಯುವ ಎಲ್ಲಾ ರೀತಿಯ ಶೋಷಣೆಯ ಮುಖಗಳನ್ನು ಚಿತ್ರಿಸಿದರು. ಇನ್ನು ಮುಂದೆ ಬಂಡಾಯ ದಲಿತ ಕಥೆಗಳು ಹೆಚ್ಚಾಗುತ್ತಾ ಒಂದು ಹೊಸ ಪರಂಪರೆಯನ್ನು ಸೃಷ್ಟಿಸಿದವು. ದೇವನೂರು ಮಹಾದೇವ, ಬೆಸಗರಹಳ್ಳಿ ರಾಮಣ್ಣ, ಬೊಳುವಾರು ಮಹಮ್ಮದ್, ಬರಗೂರು ರಾಮಚಂದ್ರಪ್ಪ, ಕಾಳೇಗೌಡನಾಗಾವಾರ, ಕುಂ. ವೀರಭದ್ರಪ್ಪ, ಮ. ನ. ಜ., ಚನ್ನಣ್ಣವಾಲೀಕಾರ, ಅರವಿಂದ ಮಾಲಗತ್ತಿ, ಮಾಗಳ್ಳಿಗಣೇಶ್, ಮೂಡ್ನಾಕೂಡು ಚಿನ್ನಸ್ವಾಮಿ, ಸಿದ್ಧಲಿಂಗಯ್ಯ, ಮುಂತಾದ ಪ್ರಮುಖ ಕಥೆಗಾರರು ಕಂಡುಬರುತ್ತಾರೆ.

ಆಧುನಿಕ ಕನ್ನಡದ ಕಥಾ ಕ್ಷೇತ್ರದಲ್ಲಿ ದೇವನೂರು ಮಹಾದೇವ ವಿಶಿಷ್ಟ ಸ್ಥಾನ ಪಡೆದಿದ್ದಾರೆ. ತೇಜಸ್ವಿಯವರಂತೆ ಮಹಾದೇವ ಕೂಡ ಭಾವವ್ಯಕ್ತಿ ನಿರಪೇಕ್ಷ ಅಭಿವ್ಯಕ್ತಿಗೆ ಮಹತ್ವ ನೀಡಿದವರು. ಸಾಮಾಜಿಕವಾದ, ಆರ್ಥಿಕಾದ ಅಸಮಾನತೆಗಳನ್ನು ಚಿತ್ರಿಸುವ ರೀತಿ ಮತ್ತು ಬದುಕಿನ ಬಗ್ಗೆ ಕಂಡುಬರುವ ಗಾಢ ಕಾಳಜಿಗಳು ಉತ್ತಮವಾದವು. ದಲಿತ ಸಮುದಾಯದ ನೋವು ಮತ್ತು ತಮ್ಮ ಅಭಿವ್ಯಕ್ತಿಯ ನಡುವೆ ಯಾವುದೇ ಬಿರುಕಿಲ್ಲ. ತಮ್ಮ ಜನಾಂಗದ ದುಡಿತ, ದಣಿವು, ಹಸಿವುಗಳು ಮಾನವೀಯ ಮೌಲ್ಯವನ್ನೇ ತಿರಸ್ಕರಿಸಿವೆ. ಜೀವಂತ ಬದುಕಿನೊಡನೆ ಮೂಡಿಬಂದ ಅದರ ಕಥೆಗಳ ಕಲೆಗಾರಿಕೆ ಮತ್ತು ಹೊರಸೂಸುವಿಕೆ ಕನ್ನಡ ಕಥಾ ಸಾಹಿತ್ಯಕ್ಕೆ ಹರಿದುಬಂದ ವಿಶೇಷ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಕಾಳಜಿಗಳಾಗಿವೆ. 'ಡಾಂಬರುಬಂದುದು, ಅಮಾಸ' ದಲಿತ ಚಳುವಳಿಯ ಧ್ಯೇಯದ ಬರವಣಿಗೆಗಳಾಗಿವೆ. ಅಲ್ಲದೆ ಸೃಷ್ಟಿ ಶೀಲ ಪ್ರತಿಭೆ ಬಹು ಸಾಧ್ಯತೆಗಳೊಡನೆ ಮಿಳಿತಗೊಂಡಿವೆ. ಯಜಮಾನ ಸಂಸ್ಕೃತಿ ಹಾಗೂ ಜಮೀನ್ದಾರಿ ಪದ್ಧತಿಯ ಹಿಡಿತದಿಂದ ಸಮಾಜವನ್ನು ಬಿಡುಗಡೆಗೊಳಿಸುವ ಬಯಕೆ ಲೇಖಕರದು. 'ಗ್ರಸ್ತ' ಕಥೆಯ ನಾಯಕ ದಲಿತವರ್ಗದ ವಿದ್ಯಾವಂತ ಹಾಗೂ ವಿಚಾರವಂತ ಇವನು ಮೇಲುವರ್ಗದವರಿಂದ ಅನೇಕ ಹಿಂಸೆಗಳನ್ನು ಅನುಭವಿಸುವ ಚಿತ್ರಣ ಈ ಕಥೆಯಲ್ಲಿದೆ. 'ದ್ಯಾವನೂರು, ಮಾರಿಕೊಂಡವರು, ಮೂಡಲ ಸೀಮೇಲಿ ಕೊಲೆಗಿಲೆ' ಮುಂತಾದವು ಅಮೂಲ್ಯ ಬರಹಗಳಾಗಿವೆ. 'ಒಡಲಾಳ' ಎಂಬುದು ನೀಳ್ಗಳತೆಯಾಗಿದೆ. 'ಮೂಲ್ಗಡಲ ಸಿಮೇಲಿ ಕೊಲೆಗಿಲೆ' ಕಥೆಯಲ್ಲಿ ನೇರವಾಗಿ ವ್ಯಕ್ತಿಯ ಕೊಲೆ ನಡೆಯದಿದ್ದರೂ ಮಾನಸಿಕವಾಗಿ ನೀಡುವ ಒತ್ತಡ ಆ ಮಟ್ಟದ್ದು ಎಂಬುದಾಗಿ ಚಿತ್ರಿಸಲಾಗಿದೆ. ಕಡಿಮೆ ಬರಹವಾದರೂ ಮೌಲ್ಯ ಹಿರಿದು. ದಲಿತ ಸಾಹಿತ್ಯದ ನೆಲೆಯಲ್ಲಿ ಕಂಡುಬರುವ ಮತ್ತೊಬ್ಬ ಮುಖ್ಯ ಕಥೆಗಾರರೆಂದರೆ ಬರಗೂರು ರಾಮಚಂದ್ರಪ್ಪ. ಸಮಕಾಲೀನ ಸಮಾಜದ ಸಾಮಾಜಿಕ ಹಾಗೂ ರಾಜಕಾರಣದ ವಸ್ತುಗಳು ಇವರ ಕಥೆಗಲ್ಲಿ ವಿಶೇಷವಾಗಿ ಮಹತ್ವ ಪಡೆದುಕೊಂಡಿವೆ. 'ಸತ್ತವನು' ಕಥೆಯು ಅನಾಥ ಭಿಕ್ಷುಕನು ರಸ್ತೆಯಲ್ಲಿ ಅಸುನೀಗಿದ ದುಸ್ಥಿತಿಯನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಬಂಡಾಯದ ಪ್ರಮುಖ ಕಥೆಗಾರರಾಗಿ ಕುಂ. ವೀರಭದ್ರಪ್ಪನವರು ಕಾಣಿಸಿಕೊಳ್ಳುತ್ತಾರೆ. 'ಕಿವುಡ ನಾಯಿಯಾದ ಪ್ರಸಂಗ, ಎಲುಗನೆಂಬಕೊರಚನೂ, ಚವುಡನೆಂಬ ಹಂದಿಯೂ, ರುದ್ರಪ್ಪನ ಖಡ್ಗ, ದೇವರ ಹೆಣ'- ಮುಂತಾದ ಕಥೆಗಳು ಬಂಡಾಯ ಮನೋಧರ್ಮ ಪ್ರಕಟಿಸುತ್ತದೆ. ಸತ್ವಪೂರ್ಣ ಶೈಲಿಯ ಮೂಲಕ ದಲಿತ ವರ್ಗದ ಬಡತನ, ಹಸಿವು ನಿರೂಪಿತವಾಗಿವೆ. ಕೆಳಜಾತಿಗಳಾದ ಮಾದರ, ಚಲವಾದಿ, ಕೊರಚ, ಕುಂಬಾರ, ಜನಾಂಗಗಳ ನೋವುಗಳನ್ನು ತಮ್ಮ ಕಥೆಗಳಲ್ಲಿ ಉತ್ತಮವಾಗಿ ಚಿತ್ರಿಸಿದ್ದಾರೆ. ದಲಿತ ಕವಿಯೆಂದು ಪ್ರಸಿದ್ಧರಾಗಿರುವ

ಸಿದ್ಧಲಿಂಗಯ್ಯನವರು 'ಮತಾಂತರ' ಎಂಬ ಒಂದೇ ಕಥೆಯನ್ನು ರಚಿಸಿದ್ದಾರೆ. ನಗರ ಮತ್ತು ಹಳ್ಳಿಗಳಲ್ಲಿರುವ ಅಸ್ಪೃಶ್ಯತೆಯನ್ನು ಬಯಲಿಗೆಳೆಯುತ್ತದೆ. ಹಿಂದೂ ಸಮಾಜದ ಕ್ರೌರ್ಯದಿಂದ ನೊಂದ ದಲಿತರು ಕಂಡುಕೊಂಡ ಮಾರ್ಗವೇ 'ಮತಾಂತರ'. ದಲಿತ ಬಂಡಾಯ ಕಥೆಗಳು ಸಾಮಾನ್ಯವಾಗಿ ಆಡುಭಾಷೆಯ ಮೂಲಕ ತಮ್ಮ ಪ್ರಾದೇಶಿಕತೆಯನ್ನು ತಂದಿರುವುದು ಒಂದು ಉತ್ತಮ ಬೆಳವಣಿಗೆಯಾಗಿದೆ. ಈ ಘಟ್ಟದ ಕಥೆಗಳು ಉಳಿದ ಮಾರ್ಗದ ಮನೋಧರ್ಮಕ್ಕಿಂತ ಭಿನ್ನ ನೆಲೆಯಲ್ಲಿ ನಿಲ್ಲುತ್ತವೆ. ಸಮಕಾಲೀನ ಸಾಹಿತ್ಯಕ ಚಳುವಳಿಯಲ್ಲಿ ಪ್ರಮುಖವಾಗಿ ಕಂಡುಬಂದ ದಲಿತ ಬಂಡಾಯ ಸಾಹಿತ್ಯವು 'ಸಣ್ಣ ಕಥೆಗಳ' ಮೂಲಕ ಸಮೃದ್ಧವಾಗಿ, ಉತ್ಕಟವಾಗಿ ದಲಿತ ಬದುಕಿನ ದರ್ಶನವನ್ನು ನೀಡಿದೆ.

ನವೋದಯದಿಂದ ಹಿಡಿದು ದಲಿತ ಬಂಡಾಯ ಯುಗದವರೆಗಿನ ಸಣ್ಣ ಕಥೆಯು ವಿವಿಧ ಆಯಾಮಗಳ, ಪರಿಸ್ಥಿತಿ ಒತ್ತಡಗಳ ಮೂಲಕ ಬೆಳೆದು ಬಂದಿದೆ. ನೂರಾರು ಕಥೆಗಾರರು ಈ ಹಿನ್ನಲೆಯಲ್ಲಿ ಕಾಣಸಿಕೊಳ್ಳುತ್ತಾನೆ. ಸಂಸ್ಕೃತಿ, ಸಂಸ್ಕಾರ, ಆದರ್ಶ, ಮಾನವೀಯತೆ, ಪ್ರೀತಿ, ಸಾಮರಸ್ಯತೆ, ಸಮತೋಲನ, ಸಂಬಂಧಗಳ ಐಕ್ಯತೆ, ಸಮಾನತೆ, ಕ್ರಿಯಾಶೀಲತೆ-ಮುಂತಾದ ಮೌಲ್ಯಗಳನ್ನು ಮಾನವ ಜನಾಂಗಕ್ಕೆ ನೀಡಿರುವ ವ್ಯಕ್ತಿಗಳು ವಿರಳವೆಂದೇ ಹೇಳಬೇಕು. ಇಂತಹ ವಿರಳ ವ್ಯಕ್ತಿಗಳಲ್ಲಿ ಕುವೆಂಪು ಕೂಡ ಒಬ್ಬರು. ಇವರು ನವೋದಯ ಸಂದರ್ಭದಲ್ಲಿ ಕಥೆಗಳನ್ನು ಸೃಜಿಸಿದ್ದರೂ ಅವುಗಳು ಸಾರ್ವಕಾಲಿಕ ಮೌಲ್ಯವನ್ನು ಮೈಗೂಡಿಸಿಕೊಂಡಿವೆ. ಅವುಗಳನ್ನು ಓದಿದಂತೆ, ಅರ್ಥೈಸಿದಂತೆ ಮೌಲ್ಯಗಳು ಸುರುಳಿ ಬಿಚ್ಚಿಕೊಳ್ಳುತ್ತದೆ. ಈ ಕಾರಣದಿಂದಲೇ ಕುವೆಂಪುರವರು ಆಧುನಿಕ ಕನ್ನಡ ಕಥಾ ಸಾಹಿತ್ಯಕ್ಕೆ ನೀಡಿರುವ ಕಥೆಗಳು ತಮ್ಮ ಸ್ವಸ್ವರೂಪದಿಂದ ಪ್ರಸ್ತುತವೆನಿಸುತ್ತದೆ. ವರ್ಷಗಳು ಉರುಳಿದಂತೆ ಜಾಗತೀಕರಣದ ಫಲವಾಗಿ ಜನಜೀವನ ಬದಲಾಗುತ್ತಾ ಹೋಗುತ್ತಿರುತ್ತದೆ. ಜನಜೀವನ ಕ್ರಮ ಬದಲಾದಂತೆ ಸಂಸ್ಕೃತಿ, ಮಾನವೀಯತೆ, ಆದರ್ಶಗಳು ತಮ್ಮ ಮೌಲ್ಯವನ್ನು ಕಳೆದುಕೊಂಡಾಗ ಸಮಾಜದಲ್ಲಿ ಅರಾಜಕತೆ ತಲೆದೋರುತ್ತದೆ. ಇಂತಹ ಸಂದರ್ಭದಲ್ಲಿ ಮಾನವೀಯ ಮೌಲ್ಯವನ್ನು ಪುನಃಸ್ಥಾಪಿಸಲು ಕುವೆಂಪುರವರ ಕಥೆಗಳು ಪ್ರೇರಣೆ ನೀಡುತ್ತವೆ. ಸಾಲದ ಮಗು, ಯಾರೂ ಅರಿಯದ ವೀರ, ಧನ್ವಂತರಿಯ ಚಿಕಿತ್ಸೆ, ಮೀನಾಕ್ಷಿಯ ಮೇಷ್ಟರು, ನನ್ನ ದೇವರು ಮುಂತಾದ ಕಥೆಗಳು ಎಲ್ಲಾ ಕಾಲಕ್ಕೂ ನೆಲೆನಿಲ್ಲತಕ್ಕ ಗುಣಗಳನ್ನು ಮೈಗೂಡಿಸಿಕೊಂಡಿವೆ.

## ಅಡಿಟಿಪ್ಪಣಿಗಳು

೧. ಗೊರೂರು ರಾಮಸ್ವಾಮಿ ಅಯ್ಯಂಗಾರ್, *ಗರುಡ ಗಂಬದ ದಾಸಯ್ಯ*, ಶಾರದ ಮಂದಿರ, ಮೈಸೂರು-೧೯೫೫, ಪುಟಸಂಖ್ಯೆ. ೪

೨. ಎಲ್. ಎಸ್. ಶೇಷಗಿರಿರಾವ್, *ಗೊರೂರು ಗೌರವ ಗ್ರಂಥ*, - ಪು. ಸಂ. ೧೮೯.

೩. ಪೂರ್ಣಚಂದ್ರತೇಜಸ್ವಿ *ಅಬಚೂರಿನ ಪೋಸ್ಟಾಫೀಸು*, -ಅಕ್ಷರ ಪ್ರಕಾಶನ, ಮೈಸೂರು, ೧೯೭೪, ಮುನ್ನುಡಿ. ಪು. ೦೫

# ಉಪಸಂಹಾರ

ಕುವೆಂಪು ಅವರು ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಪ್ರಮುಖ ಸಾಹಿತಿಯಾಗಿ, ದಾರ್ಶನಿಕ, ತತ್ವಜ್ಞಾನಿ ಹಾಗೂ ವೈಚಾರಿಕ ಚಿಂತಕರಾಗಿ ಪ್ರಸಿದ್ಧರಾಗಿದ್ದಾರೆ. ಕರ್ನಾಟಕದ ಸಂದರ್ಭದಲ್ಲಿ ಕನ್ನಡ ನಾಡಿಗೆ ಸಾಂಸ್ಕೃತಿಕ ನೆಲೆಗಟ್ಟನ್ನು ಒದಗಿಸಿದವರು. ವಸಾಹತುಶಾಹಿಯನ್ನು ವಿರೋಧಿಸುತ್ತಲೇ ಆಧುನಿಕತೆಯನ್ನು ಒಪ್ಪಿಕೊಂಡವರು. ಅವರ ವೈಜ್ಞಾನಿಕ ಹಿನ್ನೆಲೆ ಯುರೋಪ್ ಮಾದರಿಯದಾಗಿರಲಿಲ್ಲ. ಅದಕ್ಕೆ ವಿರುದ್ಧವಾದ ದೇಶೀಯ ನೆಲೆಗಟ್ಟಿನಲ್ಲಿ ವೈಜ್ಞಾನಿಕ ಚಿಂತನೆಗಳನ್ನು ಅಳವಡಿಸಿಕೊಂಡು ವೈಚಾರಿಕವಾಗಿ ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತ ಬಂದವರು. ವರ್ಗೀಕೃತ ಶ್ರೇಣಿಗಳನ್ನು ವಿರೋಧಿಸುತ್ತ ಸಮಾನತೆಯ ಸಮಾಜವನ್ನು ನಿರ್ಮಿಸುವುದು ಅವರ ಆದರ್ಶವಾಗಿತ್ತು. ಅದಕ್ಕಾಗಿಯೆ 'ಸರ್ವರಿಗೆ ಸಮಪಾಲು ಸರ್ವರಿಗೆ ಸಮಬಾಳು' ಎಂಬ ಮಂತ್ರವನ್ನು ಜಪಿಸುತ್ತ ವಿಶ್ವದ ಕಡೆ ಸಂಚರಿಸುತ್ತ ಬೆಳೆದವರು. ಆದ್ದರಿಂದಲೆ ಮನುಜಮತ ವಿಶ್ವಪಥವೆಂಬ ವಿಶ್ವಮಾನವ ಸಂದೇಶವನ್ನು ಜಗತ್ತಿಗೆ ಸಾರಿದವರು.

ಕುವೆಂಪು ಅವರಲ್ಲಿ ಎಲ್ಲಾ ವಿಚಾರಗಳು ಮೊಳಕೆಯೊಡೆದು ಹೆಮ್ಮರವಾಗಿ ಬೆಳೆಯಲು ಅದರಲ್ಲಿದ್ದ ಅಂತರ್‌ದೃಷ್ಟಿ ಇದಕ್ಕೆ ಕಾರಣ. ಇವರ ಮೇಲೆ ಟಾಲ್‌ಸ್ಟಾಯ್, ವರ್ಡ್ಸ್‌ವರ್ತ್, ಅರವಿಂದ ರಾಮಕೃಷ್ಣ ಪರಮಹಂಸರು, ವಿವೇಕಾನಂದರು, ವಿನೋಬಾ ಭಾವೆ, ಶಾರದಾದೇವಿ ತಮ್ಮ ಗುರುಗಳಾದ ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರಿ ಇವರೆಲ್ಲರ ಪ್ರಭಾವ ಮತ್ತು ದರ್ಶನಗಳು ಕುವೆಂಪು ಅವರ ಮೇಲೆ ಆಗಿವೆ. ಆದುದರಿಂದಲೆ ಕುವೆಂಪು ಅವರ ಸಾಹಿತ್ಯ ಕೇವಲ ಸಾಹಿತ್ಯವಲ್ಲ ದರ್ಶವನ್ನೀಯುವ ಉಪನಿಷತ್ತಿಗೆ ಸಮಾನವಾದುದು. ಕುವೆಂಪು ಅವರ ಯಾವುದೇ ಪ್ರಕಾರದ ಸಾಹಿತ್ಯವನ್ನು ಗಮನಿಸಿದರೂ ಅದರಲ್ಲಿ ಒಂದಲ್ಲ ಒಂದು ರೀತಿಯ ವಿಶ್ವದರ್ಶನ ಪ್ರದರ್ಶಿತವಾಗುವುದನ್ನು ಕಾಣುತ್ತೇವೆ. ಆದುದರಿಂದಲೆ ಅವರನ್ನು ದಾರ್ಶನಿಕರೆಂದು ಗುರುತಿಸುವುದು. ಕುವೆಂಪು ಅವರು ನವೋದಯ ಕಾಲಘಟ್ಟದಲ್ಲಿ ಬರುವ ಒಬ್ಬ ಪ್ರಮುಖ ಕವಿಯಾಗಿದ್ದರು. ಅವರು ಸಣ್ಣಕಥಾ ಕ್ಷೇತ್ರಕ್ಕೆ ಕೊಟ್ಟಿರುವ ಕೊಡುಗೆ ಮಹತ್ವ ಪೂರ್ಣವಾದುದಾಗಿದೆ. ಅದು ಕಾವ್ಯದಷ್ಟೇ ಶಕ್ತಿಶಾಲಿಯಾಗಿ ಸಮಾಜದ ಸಾಮಾಜಿಕ ಸಮಸ್ಯೆಗಳನ್ನು ಅನಾವರಣಗೊಳಿಸುವಲ್ಲಿ ಯಶಸ್ವಿಯಾಗಿದೆ.

ಆಧುನಿಕ ಕಾಲಘಟ್ಟದ ಪ್ರಮುಖ ಕಥೆಗಾರರಲ್ಲಿ ಕುವೆಂಪು ಅವರು ಅತ್ಯುತ್ತಮ ಕಥೆಗಾರರು. ಅವರ ಬಹುತೇಕ ಕಥೆಗಳು ಕನ್ನಡ ಸಣ್ಣಕತೆಗಳ ಸಾಲಿನಲ್ಲಿ ಸದಾಕಾಲಕ್ಕೂ ನಿಲ್ಲಬಲ್ಲವು. ಕುವೆಂಪು ಅವರ ಕತೆಗಳಲ್ಲಿ ಸಾಮಾಜಿಕ ಕಳಕಳಿ, ಮಾನವೀಯ ಅನುಕಂಪ ವ್ಯಕ್ತವಾಗಿದೆ. ಎಲ್ಲ ಕತೆಗಳಲ್ಲಿ ಪ್ರಕೃತಿಯ ಚಿತ್ರಣ ಇದ್ದೇ ಇರುತ್ತದೆ. ಪ್ರಕೃತಿಯ ಚಿತ್ರಣ ಕತೆಗೆ ಭಾರವಾಗುವುದರ ಬದಲು ಕತೆಯ ಒಂದು ಅವಿಭಾಜ್ಯ ಅಂಗವಾಗಿಯೇ ಬರುತ್ತದೆ. ಕುವೆಂಪು ಅವರು ತಮ್ಮ ಕತೆಗಳಲ್ಲಿ ಜನರ ಮೌಢ್ಯವನ್ನು ಜಾತೀಯತೆಯ ವಿಷಬೀಜವನ್ನು, ಪುರೋಹಿತ ಶಾಹಿಯ ಖಂಡನೆಯನ್ನು ಸಶಕ್ತರಾಗಿ ಚಿತ್ರಿಸಿದ್ದಾರೆ. ಕುವೆಂಪು ಅವರ ತಾತ್ವಿಕ ಧೋರಣೆಗಳು, ಸಾಮಾಜಿಕ ನಿಲುವುಗಳು ಪ್ರಗತಿಪರವಾಗಿ ಕಂಡುಬರುತ್ತವೆ. ಶೋಷಿತ ವರ್ಗದ ಪರವಾದ ಮಾನವೀಯ ಕಾಳಜಿ ಹಲವಾರು ಕಥೆಗಳಲ್ಲಿ ವ್ಯಕ್ತವಾಗಿದೆ. ರೈತನ ಬದುಕು, ಅವನ ಯಾತನೆಯನ್ನು 'ಧನ್ವಂತರಿಯ ಚಿಕಿತ್ಸೆ' ಕತೆಯಲ್ಲಿ ಚಿತ್ರಿಸಲಾಗಿದೆ. ಹೀಗೆಯೆ ಕುವೆಂಪು ಅವರ ಬಹುಪಾಲು ಕಥೆಗಳಲ್ಲಿ ಸಾಮಾಜಿಕ ಜೀವನದ ದರ್ಶನವನ್ನು ಕಾಣುತ್ತೇವೆ.

ನವೋದಯ ಕಾಲಘಟ್ಟದಲ್ಲಿ ಶೂದ್ರವರ್ಗದ ಪರವಾದ ಹಾಗೂ ಜಾತಿ, ವರ್ಗ, ವರ್ಣವ್ಯವಸ್ಥೆಯ ಅಸಮಾನತೆಯ ವಿರುದ್ಧ ಗಟ್ಟಿಧ್ವನಿ ಎತ್ತಿದವರು ಕುವೆಂಪು. ಇವರ ಎಲ್ಲ ಕಥೆಗಳಲ್ಲಿ ಮಾನವೀಯ ಮೌಲ್ಯಗಳ ಶೋಧನೆಯನ್ನು ಕಾಣುತ್ತೇವೆ. ಪರಸ್ಪರ ನಂಬಿಕೆ, ವಿಶ್ವಾಸ ಒಂದು ಮೌಲ್ಯವಾಗಿ ಪ್ರತಿಪಾದಿತವಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ನಡೆದುಕೊಳ್ಳುವವರು ತಾವಾಗಿಯೇ ಪತನಗೊಳ್ಳುತ್ತಾರೆ ಎಂಬುದು ಸಹಜ ಸತ್ಯವಾಗಿದೆ. ಕುವೆಂಪು ಅವರ ಕಡೆಗಳಲ್ಲಿ ಜ್ಯೋತಿಷ್ಯ ಮತ್ತು ಜ್ಯೋತಿಷಿಗಳು ದೆವ್ವದ ಕಾಟಗಳು ಹಾಸು ಹೊಕ್ಕಾಗಿವೆ. ಒಂದೆಡೆ ಇವುಗಳನ್ನು ಆಚರಿಸುವವರಿಗೆ ಇದರ ಬಗೆಗೆ ನಂಬಿಕೆ ಮತ್ತು ಮನೋಬಲವನ್ನು ಕೊಡುತ್ತವೆ.

ಆದರೆ ಕುವೆಂಪು ಅವರು ಕಥೆಗಾರರಾಗಿ ಈ ನಂಬಿಕೆಯನ್ನೆ ತಮಾಷೆ ಮಾಡಿ ವ್ಯಂಗ್ಯ ಮಾಡಿದ್ದಾರೆ. ಹಳ್ಳಿಯ ಮುಗ್ಧರನ್ನು ಜ್ಯೋತಿಷ್ಯ ಮೌಢ್ಯತೆ ಹೇಗೆ ದಾರಿ ತಪ್ಪಿಸುತ್ತಿದೆ ಹಾಗೂ ಶೋಷಣೆಗೆ ಕಾರಣವಾಗಿದೆ ಎಂಬುದನ್ನು ಉದ್ದಕ್ಕೂ ಹಾಸ್ಯ ಶೈಲಿಯಲ್ಲಿ ಅನಾವರಣಗೊಳಿಸುತ್ತ ಹೋಗುತ್ತಾರೆ. ಎಲ್ಲ ಕತೆಗಳ ಮೂಲಕ ಸಮಕಾಲೀನ ಸಮಾಜದ ವೈದೃಶ್ಯಗಳನ್ನು ಎತ್ತಿ ತೋರಿಸುತ್ತಾರೆ.

ಕುವೆಂಪು ಅವರ ಕಥೆಗಳು ವಾಸ್ತವಿಕ ನೆಲೆಯಲ್ಲಿ ರಚನೆಗೊಂಡಿವೆ. ಸುಮಾರು ವರ್ಷಗಳ ಹಿಂದೆ ಪ್ರಕಟವಾದ ಈ ಕತೆಗಳಲ್ಲಿ ಪ್ರತಿಪಾದಿತವಾಗಿರುವ ಜೀವನ ಮೌಲ್ಯಗಳು ಪ್ರಗತಿ ಪರವಾದ ಆಲೋಚನೆಗಳು ಇಂದಿಗೂ ಅಷ್ಟೇ ಪ್ರಸ್ತುತವಾಗಿವೆ. ಹೀಗಾಗಿ ಕುವೆಂಪು ಅವರ ಕಥೆಗಳು ಇಂದಿಗೂ ನಮ್ಮ ಸಮಾಜಕ್ಕೆ ಉತ್ತಮವಾದ ಕೊಡುಗೆಗಳಾಗಿವೆ.

ಕುವೆಂಪು ಅವರ ಕಥೆಗಳ ವಸ್ತು ವೈವಿಧ್ಯಮಯವಾಗಿದ್ದು ಈ ಎಲ್ಲಾ ವೈವಿಧ್ಯತೆಯನ್ನು ಈ ನಿರ್ಬಂಧದಲ್ಲಿ ಗುರುತಿಸಲಾಗಿದೆ. ಶೈಲಿ ಸರಳವಾದ ಭಾಷೆಯಲ್ಲದಿದ್ದರೂ ತಿಣುಕಾಡುವಂತಹ ಉಕ್ಕಿನ ಕಡಲೆಯಲ್ಲ. ಕುವೆಂಪು ಕಥೆಗಳಲ್ಲಿ ಬರುವ ಪಾತ್ರಚಿತ್ರಣವಂತು ಅದ್ಭುತವಾಗಿದೆ. ಅಲ್ಲಿ ಮನುಷ್ಯನಿಗಿರುವಷ್ಟೇ ಪ್ರಾಮುಖ್ಯತೆ

ಕನಿಷ್ಠ ಪ್ರಾಣಿಗಳಿಗೂ ದೊರೆಯುತ್ತದೆ. ಕೆಲವು ಪಾತ್ರಗಳಂತು ಸಂಕೀರ್ಣವಾಗಿ ಬಂದಿದ್ದರೆ ಮತ್ತೆ ಕೆಲವು ಪಾತ್ರಗಳು ಹಾಸ್ಯದ ನವಿರಿನೊಂದಿಗೆ ಮನಸ್ಸನ್ನು ಹಗುರಗೊಳಿಸುತ್ತವೆ. ಸ್ತ್ರೀ ಪಾತ್ರಗಳು ವೈಶಿಷ್ಟ್ಯಪೂರ್ಣವಾದ ಗಾಂಭೀರ್ಯತೆಯನ್ನು ಪಡೆದುಕೊಂಡಿವೆ.

ಕುವೆಂಪು ಅವರು ಆಧುನಿಕ ಕನ್ನಡ ಸಾಹಿತ್ಯಕ್ಕೆ ತಮ್ಮ ಸಣ್ಣ ಕತೆಗಳ ಮೂಲಕ ಗಾತ್ರದಲ್ಲಿ ಅಲ್ಲದಿದ್ದರೂ ವಿಶೇಷವಾದ ಕೊಡುಗೆಯನ್ನು ನೀಡಿರುವುದು ಸ್ಪಷ್ಟ. ಮಹಾಕವಿಯ ಲೇಖನಿ ಸಣ್ಣಕಥೆಯನ್ನೂ ವಿಶ್ವಮಾನವ ದೃಷ್ಟಿಯಿಂದ, ಸಾಮಾಜಿಕ ದೃಷ್ಟಿಯಿಂದ ನೋಡಿರುವುದನ್ನೂ ಗುರುತಿಸಬಹುದು.

# ಗ್ರಂಥಸೂಚಿ


ಡಾ. ಅರವಿಂದ ಮಾಲಗತ್ತಿ (ಸಂ.) : *ಕುವೆಂಪು ಕೃತಿ ವಿಮರ್ಶೆ*, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು-೦೬, ೨೦೦೬

ಡಾ. ಕರೀಗೌಡ ಬೀಚನಹಳ್ಳಿ : *ಶತಮಾನದ ಸಣ್ಣ ಕಥೆಗಳ ಸಮೀಕ್ಷೆ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು-೫೬೦೦೦೨, ೨೦೦೩

ಕೀರ್ತಿನಾಥ ಕುರ್ತಕೋಟಿ : *ಯುಗಧರ್ಮ ಹಾಗೂ ಸಾಹಿತ್ಯ ದರ್ಶನ*, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೩

ಕುವೆಂಪು : *ಬೆರಳ್‌ಗೆ ಕೊರಳ್*, ಉದಯರವಿ ಪ್ರಕಾಶ, ವಾಣೀವಿಲಾಸಪುರಂ, ಮೈಸೂರು ೨, ಮೊದಲ ಮುದ್ರಣ ೧೯೬೧

ಕುವೆಂಪು : *ಶ್ಮಶಾನ ಕುರುಕ್ಷೇತ್ರಂ*, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು ೨, ಮೊದಲ ಮುದ್ರಣ ೧೯೬೨

ಕುವೆಂಪು : *ಜಲಗಾರ*, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು ೨, ಮೊದಲ ಮುದ್ರಣ ೧೯೬೨

ಕುವೆಂಪು : *ನನ್ನ ದೇವರು ಮತ್ತು ಇತರ ಕಥೆಗಳು*, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು ೨, ಮೊದಲ ಮುದ್ರಣ ೧೯೬೩

ಕುವೆಂಪು : *ಸಂನ್ಯಾಸಿ ಮತ್ತು ಇತರ ಕಥೆಗಳು*, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು-೨. ಮೊದಲ ಮುದ್ರಣ ೧೯೬೩

ಕುವೆಂಪು : *ಶ್ರೀ ರಾಮಾಯಣ ದರ್ಶನಂ*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೬, ಮೊದಲ ಮುದ್ರಣ ೧೯೭೧

ಡಾ. ಕೋದಂಡರಾಮ. ಎನ್. ಕೆ. : ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ ಗಾಯತ್ರಿ ಸ್ಮಾರಕ ಗ್ರಂಥ ಮಾಲೆ, ೧೪, ದಾರಿದೀಪ ವಿದ್ಯಾಸಂಸ್ಥೆ, ಆವರಣ, ಬೋಗಾದಿ, ಮೈಸೂರು, ೧೯೯೬

ಜವರೇಗೌಡ ದೇ. (ಸಂಪಾದಕರು) : *ಗಂಗೋತ್ರಿ*, ಗೀತಾಬುಕ್‌ಹೌಸ್, ಮೈಸೂರು ೧, ಮೊದಲ ಮುದ್ರಣ ೧೯೬೮

ಜವರೇಗೌಡ. ದೇ. (ಸಂಪಾದಕರು) : *ಸಹ್ಯಾದ್ರಿ*, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು-೧೨, ಮೊದಲ ಮುದ್ರಣ ೧೯೭೫

ಜವರೇಗೌಡ. ದೇ. (ಸಂಪಾದಕರು) : ಪುಸ್ತಕ ಪ್ರಪಂಚ (ಮಾಸಿಕ) ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು-೪, ಮೇ, ೧೯೮೯

ಜವರೇಗೌಡ. ದೇ. (ಸಂಪಾದಕರು) : *ಕುವೆಂಪು ಶೈಲಿ*, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು-೧೨, ಮೊದಲ ಮುದ್ರಣ-೧೯೯೧

ಜವರೇಗೌಡ. ದೇ. (ಸಂಪಾದಕರು) : *ಕುವೆಂಪು ದರ್ಶನ*, ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬, ಮೊದಲ ಮುದ್ರಣ ೨೦೦೬

ನಾಗಭೂಷಣ ಡಿ. ಎಸ್. : *ಕುವೆಂಪು - ಒಂದು ಪುನರನ್ವೇಷಣೆ*, ಲೋಹಿಯಾ ಪ್ರಕಾಶನ, ಗಾಂಧಿನಗರ, ಬಳ್ಳಾರಿ-೫೮೩೧೦೩, ಪ್ರಥಮ ಮುದ್ರಣ ೨೦೦೫

ನಾಗರಾಜ ಆರ್. ಜಿ. ಹಳ್ಳಿ (ಸಂ.) : *ಯುಗದ ಕವಿ ಜಗದ ಕವಿ*, ಅನ್ವೇಷಣೆ, ಪ್ರಕಾಶ, ೩೭/೨ಎ, ನಿಸರ್ಗ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು-೫೬೦೦೪೦, ೨೦೦೪.

ಡಾ. ನಾವಡ. ಎ. ವಿ. (ಸಂ.) : *ಕುವೆಂಪು ಸಮಗ್ರ ಕಾವ್ಯ ಸಂಪುಟ ೧*, ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦

| | |
|---|---|
| ಪೂರ್ಣಚಂದ್ರ ತೇಜಸ್ವಿ. ಕೆ. ಪಿ. | : *ಅಣ್ಣನ ನೆನಪುಗಳು*, ಪುಸ್ತಕ ಪ್ರಕಾಶನ, ಸರಸ್ವತಿಪುರಂ, ಮೈಸೂರು ೦೯, ಮೊದಲ ಮುದ್ರಣ ೨೦೦೩ |
| ರಾಘವೇಂದ್ರರಾವ್ ಎಚ್.ಎಸ್. | : *ಶತಮಾನದ ಸಾಹಿತ್ಯ ವಿಮರ್ಶೆ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು -೫೬೦೦೦೨, ಮೊದಲ ಮುದ್ರಣ ೨೦೦೧ |
| ಡಾ. ವೇಣುಗೋಪಾಲರಾವ್. ಎ.ಎಸ್. | : *ಶ್ರೀ ಕುವೆಂಪು ಅವರ ಸಣ್ಣ ಕಥೆಗಳು*, ಸಹ್ಯಾದ್ರಿ ಪ್ರಕಾಶನ, ಜಯಲಕ್ಷ್ಮೀಪುರಂ, ಮೈಸೂರು-೧೨, ೧೯೮೪ |
| ಶಿವಾರೆಡ್ಡಿ. ಕೆ. ಸಿ. | : *ಕನ್ನಡ ಹಾಡುಪಾಡು*, ಅಧ್ಯಯನ ಮಂಡಲಿ, ೧೩/೮೫ ಆರ್. ವಿ. ರಸ್ತೆ, ಬಸವನಗುಡಿ, ಬೆಂಗಳೂರು, ಪ್ರಥಮ ಮುದ್ರಣ ೨೦೦೩ |
| ಸಿದ್ದಲಿಂಗಯ್ಯ ಜಿ. ಎಸ್., ಕೃಷ್ಣಯ್ಯ ಎಂ. ಎಚ್. (ಸಂ.) | : *ಸಾಲು ದೀಪಗಳು*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಜೆ.ಸಿ. ರಸ್ತೆ, ಬೆಂಗಳೂರು, ೧೯೯೧ |

